# ಹೂವಾಡಿಗಿತ್ತಿ

ರಾ. ಸು. ಮಣಿ

ಪ್ರಕಾಶಕರು
ಎಚ್. ಆರ್. ಸುಬ್ರಹ್ಮಣ್ಯ
೨೨೦೦, ಓಲ್ಡ್ ವುಡ್‌ಯಾರ್ಡ್, ಕೃಷ್ಣರಾಜ ಮೊಹಲ್ಲ,
ಮೈಸೂರು

# ಹೂವಾಡಿಗಿತ್ತಿ

ರಾ. ಸು ಮಣಿ

ಪ್ರಕಾಶಕರು
ಎಚ್. ಆರ್. ಸುಬ್ರಹ್ಮಣ್ಯ
೨೨೦೦, ಓಲ್ಡ್ ವುಡ್‌ಯಾರ್ಡ್, ಕೃಷ್ಣರಾಜ ಮೊಹಲ್ಲ,
ಮೈಸೂರು

# ಪರಿವಿಡಿ

# ಸರಸ್ವತಿ

ಎನ್ನ ಮನದಲಿ ಬಂದು ಎನ್ನ ಪ್ರೇರಿಸುವನಕ
ನಾನೊಬ್ಬ ಪೆಚ್ಚು ಪಂಡಿತ ತಾಳ, ಲಯ, ಗಮಕ
ತಿದ್ದಿ ಸರಿಪಡಿಸಿಕೊಳ್ಳರೆ ತೊಡಕುಗೊಂಡೆ ಅತಿ
ನಿದ್ದೆ, ಕನಸೆಚ್ಚರದಿ ನಾ ಅರಿವೆ ಓ ಮಾತೆ
ಎನ್ನ ಜೀವದಲಿಂದು ನಿನ್ನ ಪ್ರಿಯ ಅನುನಯುವ,
ಕಣ್ಣೆ ಕಾಣದ ಒಂದು ಅಮರ ಸ್ಪರ್ಶವೂ ಮಿಡಿವ
ತಂತಿ ಮಂಗಳ ಮಧುರ ಸ್ವನಕೆ ಹುಚ್ಚೇಳ್ವಂತೆ
ಭ್ರಾಂತಿಮನ, ಭ್ರಾಂತಿಯೆದೆ ಸರಣಿಯೇ ಕೆಟ್ಟಂತೆ
ಎರೆವುವಾವೇಗ–ಭಾವಗಳ ಸ್ವಾಚ್ಛಂದವನು,
ಮರೆವುದೆನ್ನಯ ಜೀವ ಇಹ–ಪರಗಳೆಲ್ಲವನು
ಮಾದಕವೆ ಆದಂತೆ! ಆ ಮುತ್ತು ಒಡೆದ ದಿನ
ಈ ಧರೆಯುಲದಕಾವ ಜೀವಿಸುವ ಅಭಿಮಾನ?
ಜೀವ, ಚೈತನ್ಯಗಳು ಹೋದ ಬಣಬೆಯು ಮೇಲೆ
ಯಾವ ಅಭಿಮಾನ, ಮುಚ್ಚಟೆಯೇನು ಆಮೇಲೆ?

# ಹೂವಾಡಿಗಿತ್ತಿ

೧

ಹುವ್ವ ಮಾರುವಳು ಹುವ್ವಿನಂಥವಳು
ಹತ್ತೊ ಹನ್ನೆರಡೊ ಬಾಲೆಗೆ.
ಮುಯ್ಯ ಮೈಯಿನವನೊಬ್ಬನೊಡನಿಹಳು
ಅತ್ತ ದಾರಿ ತಿರುಹೊತ್ತಿಗೆ.

೨

ಹುಬ್ಬು ತೇಲಿಸುತ ನೋಡಿದೆಲ್ಲರನು
'ಹುವ್ವ ಕುಚ್ಚಾಣಿ' ಯೆನುವಳು;
ಒಬ್ಬರೂ ಹುವ್ವ ನೋಡದವಳನೇ
ನೋಡಿ ಹುವ್ವೆಂದೆ ನಿಲುವರು.

೩

ನಾಚಿ ಕೊಂಕಿಸುತ ಮೊಗವ ತಲೆವಾಗಿ
'ಕುಚ್ಚು ಹುವ್ವಾಣೆ' ತೊನೆವಳು.
ನಾಚಿ ಕೊಂಜುವದ ನೋಡಿ ಮುಯ್ಯಿನವ
'ಲಚ್ಚಿ—ಬಾ;' ಎನ್ನುತೊಯ್ವನು.

## ಹೂವಾಡಿಗಿತ್ತಿ—ಕವಿ

೧

ಬೊಂಬು ಗಳು ಗರಿ ಹಚ್ಚಿ ಮುಂದೆ
ತುಂಬುಗೆನ್ನೆಯ ಲಚ್ಚಿಗೆಂದೆ—
ಗೊಂಬೆ-ಸಮ ನೀ ಹಗಲು-ಸಂದೆ
ಕುಳಿತು ಕಟ್ಟುವೆ ಏತಕೆ
ನಲಿಯದಾಡದೆ ಬಾರಿಗೆ?

೩

೨

ತುಂಬಿಬಂದಿರಲಿಲ್ಲ ಬಣ್ಣ, ವಿ-
ಳಂಬಿಸೆತ್ತಿ ವಿಚಿತ್ರ ಕಣ್ಣ
“ ತುಂಬಿಬಂದಿವೆ ಮೊಗ್ಗು ಅಣ್ಣಾ
ಒಡೆದು ಸ್ವಲ್ಪವೆ ಹೊತ್ತಿಗೆ
ಕೆಡುವು ”ದೆಂದಳು “ ಸಂದೆಗೆ ”

೩

ಕಂದೆಸೀರೆಯನುಟ್ಟ ಬಡವೆ,
ಎಂದೆ ನೋಡಿದ ಕಣ್ಣ ತೊಡವೆ !
ಒಂದು ತಿಳಿಯದು, ಬಾಲೆ ನಡುವೆ !
ಖಿನ್ನನಾದೆನು ಮಾತಿಗೆ,
ಹೆಣ್ಣು-ಹುವ್ವಿನ ಜಾತಿಗೆ !

## ಹುವ್ವು ಕಟ್ಟುವುದು

೧

ಲಚ್ಚಿ ಹುವ್ ಕಟ್ಟುವುದೆ ಒಂದು ಚೆಂದ-ತಂದ
ಅಚ್ಚಮಲ್ಲಿಗೆ ಪಚ್ಚೆತೆನೆಗಳಿಂದ !
ಮೆಚ್ಚೆಂದ ತರವೆ ಪೋಣಿಸುತ ಪೋಣಿಸಿ ಅಂದ
ದಚ್ಚಮಲ್ಲಿಗೆಯಂಥ ಕೈಗಳಿಂದ !

೨

ಅಗೊ ನವ್ಯನವೀನ ಕುಂದಣಗಾರ್ತಿ ! ಹೆಣೆಯುತಿದೆ
ಸೊಗಸೊಂದು ಇಂದ್ರಧನು ಸಮವೆ ಹಾರ !
ಲಗುವೆ ಮಾಯೆಯ ಒಂದು ಕೈಚಳಕವೆನಿಸುತಿದೆ !
ನಗುತ ತೆಗೆದಳೊ ಇಟ್ಟ ಕೈ ಒಂದು ಸ್ವೈರ !

೩

ಆವ ಚದುರವು ಅಂತು ದಿವ್ಯ ಹೆಣೆದಿತ್ತಿಲ್ಲ !
ಆವ ಶಿಕ್ಷಣದಿಂದಲೂ ಬಂದುದಲ್ಲ !
ಹೇವನಿವೆ ಕ್ರಮ ನಿಯಮ ಸಂವಿಧಾನಗಳಿಲ್ಲ !
ಆವುದೋ ತನ್ನದೇ ತನ್ನ ಪರಿಯೆಲ್ಲ !

೪

ತುಂಬು ಗಂಧಕೆ ಗಾಳಿ ಸೊಕ್ಕುತಿದೆ, ಹಣಿಕೆಯು ವಿ-
ಚಿತ್ರವಾಗಿದೆ ! ಒಂದು ಹುವ್ವು ನಲವೊಂದು !
ರಂಬೆ ಮೈಗಿಟ್ಟ ತಳಿರೊಡವೆ ತೊಡವುಗಳಂತೆ
ಪತ್ರೆ ಕೋದಿದೆ ! ಇಲ್ಲ ಕೊರತೆಯೊಂದೂ !

## ಲಚ್ಚಿಯ ಅಜ್ಜ

೧

ಹಗಲೂ ಸಂಜೆಯು ದುಡಿದೂ ದುಡಿದೂ
ಮೃಗವಾಗಿದೆ ಮೈ-ಮನ ತಾರಿ.
ರಗಳೆಯು ಚಿಂದಿ ; ಸೀಕಲು ಕಡಿದು
ಹಗರಣಗೊಂಡಿದೆ ವಿಧಿ ಮೀರಿ.

೨

ಗರಿ-ಗೆದ್ದಲು ಗೂಡಿನ ಬಡ ರೈತ,
ಕುರಿ ಆಡೊಂದೆರಡವನಾಸ್ತಿ.
ಬರಿ ಗುತ್ತಿಗೆ ಹೂದೋಟದ ರೈತ,
ವರಮಾನವೊ ದಣಿಗೇ ಜಾಸ್ತಿ.

೩

ಆ ದಣಿಗಿರುವರು ರೈತರು ಇತರರು
ಗಾದಿಯ ಹತ್ತಿಸಿ ದುಡಿವವರು.
ಊದಲು ಮೋರೆಯ ದಣಿ ಬಲು ಜೋರು.
ಮಾದನೊ ವಿಶ್ವಾಸದ ಆರು.

೪

ಒದಗಿದ ಕಷ್ಟಪರಂಪರೆಯಲಿ ಕಹಿ
ಬದುಕಾಗಿದೆ, ದೈವವೆ ದ್ರೋಹಿ
ಮುದಿತನದಲಿ ಜವ ಮಗ ಸೊಸೆ ಮಡುಹಿ
ವಿಧುರನೊ ಕಂಗಟ್ಟಿಹ, ಪಾಹಿ !

೫

ನೆಚ್ಚೆಲ್ಲವು ಕಿಚ್ಚೆದ್ದಿದೆ ಸಿಡಿದು,
ಬೆಚ್ಚಿದ ಜೀವವೊ ಅತಿ ಘೋರ !
ರೊಚ್ಚೆದ್ದಳಲಿನ ಕಾಲುವೆ ಹರಿದಿದೆ
ಮುಚ್ಚಿದ ಕಣ್ಣಲಿ ಅತಿ ಸ್ವೈರ !

೬

ದುಡಿಮೆಯ ಬೆವರನು ಅಂತೆಯು ತೊಡೆದು
ಒಡ ಬಾಳಿನ ಕಣ್ಣೀರೊರಸಿ
ಕಡೆ ಚಿಂದಿಯಲಂತೆಯು ಯಂತ್ರವೆ ಅದು
ನಡೆವುದು ಊರಿಗೆ ಸಡಗರಿಸಿ

೭

ಲಚ್ಚಿಯೆ ಕಟ್ಟಿದ ಕುಕ್ಕೆಯ ಹುವ್ವನು
ಮೆಚ್ಚಿನ ನಾಡಿಗರಿಗೆ ಮಾರಿ
ಮುಚ್ಚಟೆಗಾಗಿಯೆ ಬಿಸ್ಕತ್-ಮಿಠಾಯಿ
ಹಚ್ಚಡ ಬಳೆ ತರುವುದು ಭಾರಿ

೮

ಹೆಚ್ಚಿನ ಹಣ ಕೂಡಿದ ದಿನ ಬ್ರೋಚು
ಕುಚ್ಚುಂಗುರ ಲೋಲಕು ಟೇಪು
ಬಚ್ಚಾಣಿಯ ಸಾಮಾನು ಮತಾಪು,
ಮುಚ್ಚುಮರೆಸಿ ಸ್ಲಿಪ್ಪರು ಸೋಪು.

೯

ಲಚ್ಚೆಯೊ ಕಡಿದು ಮಿಠಾಯಿ-ಬಿಸ್ಕತ್
ಹಚ್ಚಡವುಟ್ಟುಂಗುರ ತೊಟ್ಟು
ಕುಚ್ಚೂ ಟೇಪೂ ಲೋಲಕು ಧರಿಸಿ
ಬಚ್ಚಾಣಿಯ ಸಾಮಾನಿಟ್ಟು

೧೦

ಸ್ಲಿಪ್ಪರು ಹಾಕಿ ವಿಲಕ್ಷಣ ನಲಿದು
ತಪ್ಪಿನ ಹೆಜ್ಜೆಗಳಲಿ ಜಾರಿ
ಒಪ್ಪಿದ ಮುಯ್ಯಿನ ಜೀವವದೆಲ್ಲವು
ತೆಪ್ಪರುವುದು ಮೋದಕೆ ಹಾರಿ.

೧೧

ಏನೋ ಹಗುರ, ಏನೋ ನೆಚ್ಚು,
ಏನೋ ಸ್ವಾತಂತ್ರ್ಯದ ಹುಚ್ಚು.
ಏನೋ ದಾಸ್ಯ — ಅರಿಷ್ಟ ನಿವಾರಣೆ
ದೀನರ ಕುಲಕೇ ಬಹ ಮೆಚ್ಚು.

## ಪುಷ್ಪಾಪಚಯ

೧

ಮೃದುವೆರಳಲಿ ಮದಿರಂಗಿಯ ಉಗುರಲಿ
ಹುವ್ ಕೊಯ್ವಳು ಬಾಲೆ.
ಅದು ಮಧುಪವೊ ಮಧುಜೀವವೊ ಎನಿಸಿ
ಹುವ್ ಕೊಯ್ಯುವ ಲೀಲೆ !

೨

ಹನಿ ಮುತ್ತಿನ ಮಣಿ ಹುಲ್ಲಲಿ ಮೆರೆದಿದೆ
ದೇದೀಪ್ಯದ ಜ್ವಾಲೆ !

೨

ಮನ ಮುಟ್ಟುತ ‘ ಕೂ ಕೂ ’ ಬಗ್ಗಿಸುತಿದೆ
ಕೋಗಿಲೆ ತರು ಮೇಲೆ !

೩

ರತ್ನೋಜ್ವಲ ರಥವೇರಿದ ದಿನಮಣಿ
ಎತ್ತೆತ್ತಲು ಚೆಲ್ಲಿ
ರತ್ನೋಜ್ವಲ ದೀಧಿತಿಯನು ತಿರೆ ತಳಿ-
ರೆತ್ತಲು ದಿವವಲ್ಲಿ.

೪

ನರೆ ಮುಯ್ವಿನ ಕಡು ಸೇದೆಯೊ ಯಾತದ
ನೀರನು ಎತ್ತೆತ್ತಿ
ಕರೆದುಬ್ಬಸ ತಲೆ ಕೈಯಲಿ ಕುಳಿತಿದೆ
ಮೋರೆಯ ಕಡೆಗೊತ್ತಿ

೫

ಮಧುವೀಂಟಲು ಅಳಿ ಹುವ್ಗಳ ನೆರೆದಿರೆ
ಅದ ಚೆದುರೋಡಿಸುತ
ಮುದುಗೈ ಚಪಲತೆಯಿಂದದೊ ಭ್ರಮಿಸಿರೆ
ಚದುರೆಯು ಹುವ್ವೆನುತ

೬

ಭಯ ಬೆಚ್ಚಿದ ಕಣ್ಮಲರಲಿ ನಿಟ್ಟಿಸಿ
ನಯದಿ ನಿವಾರಿಸುತ
ಲಯದೇಟಿಗ ದನಿ ಚಿಮ್ಮುವವೊಲೆ ಪದ
ದ್ವಯುಗಳ ಹಾರಿಸುತ

೭

ಮನಸಾರೆಗೆ ಹುವ್ ಬುಟ್ಟಿಯು ತುಂಬಕೆ
ತನುವುಲ್ಲಸಪಡುತ

೭

ಘನವಾಗಿಹುವನೆ ಮೊದಲುತ್ಸುಕದಲಿ
ನೆನೆದಚ್ಚರಿಪಡುತ

೮

ಚಿವುಟುವ ಉಗುರಾತುರದಲಿ ಅಂತೆಯೆ
ನನೆಗಳನೂ ತಪ್ಪಿ
ನವೆದಿರೆ, ಉದುರಿರೆ ದಳ ಕರಿತಂತೆಯೆ
ಒಣಗಿರೆ ಕಳೆದೊಪ್ಪಿ

೯

ಸಿರಿಗಂಪಿನ ಸೊಗ ಸೊಗಸಿನ ಬಣ್ಣದ
ಅರಳೆಲ್ಲವ ಭ್ರಮಿಸಿ
ಹಿರಿಯೊಂದರಳದರಲಿ ಬಲಿಗೊಳುವುದ
ಅರಿತೆದೆ ಕಂಡರಿಸಿ

೧೦

ನೆರಿ ನೀಲಿಯ ಸೀರೆಯನುಟ್ಟವಳನು
ಬರಿ ಸಂದೆಗ ಮರೆಸಿ
ಇರಬಹುದೆನಿಸಿತು ಕಾಳಿಕೆ ಚೊಚ್ಚಲು
ಮರುಕಾಳಿಕೆಯೆನಿಸಿ.

## ಲಚ್ಚಿಯ ಉದ್ಯಾನ

೧

ನೆರಿಗೆ ಚಿಮ್ಮಿ ಎತ್ತಿ ಬಿಗಿದು
ಸೆರಗ ಸೆಳೆದು ಸೊಂಟ ಬಿಗಿದು
ಧರೆಯ ನಗೆವಳಗೋ ಅಗೆದು
ಸಿತ ಶಿಲೋಪಮೆ,
ಬರಿಯ ಮೃದುಲ ಸುಮವ ನಗುವ
ಸುಂದರ ಪ್ರತಿಮೆ !

೨

ಕೆದರಿಹೋದ ಮುಡಿಯ ಬಿಗಿದು
ಚದುರಿ ಹರಿದ ಬೆವರ ತೆಗೆದು
ಮದುರ ಕಾಲ ಅಡ್ಡ ತೆಗದು
ಪ್ರತಿ ತಿಲೋತ್ತಮೆ,
ಒದರಿಕೊಂಡು ಯಾತ ಮೊಗೆದು
ಎತ್ತುವಳಸಮೆ !

೩

ಅಜ್ಜ ಹಣ್ಣು ಹಣ್ಣು ಮುದುಕ,
ಅಜ್ಜು ಗುಜ್ಜು ಮೈಯಿ, ಉದಕ
ಗೊಜ್ಜು ಗೀಜುಗಣ್ಣು, ಬದುಕ
ಬಗ್ಗಿ ನಾಗಿಸಿ
ಉಜ್ಜುಗಕ್ಕೊ ಕೋಲನೂರಿ
ನಿಲುವನು ನಗಿಸಿ.

೪

ಹುಡುಗಿ ಕಷ್ಟ ಕಂಡು ಮುದುಕ
ಮುಡುಗಿ ಕುಳಿತು ಕಣ್ಣ ಉದಕ
ಮಿಡಿದು ನೆಲಕೆ ಅಗೋ ಬದುಕ
ಇಡುವನಳಲಿಗೆ,
ಕಡೆಯ ಬಾಳ ಶಕ್ತಿ ಹಾಳ
ಜಡ ಕೈ ಕಾಲ್ಗ.

೫

ತೋಟ ಬಾವಿ ಪಾತಿ ಗಿಡ
ನೋಟ ಸುಖದ ಹೂ-ಪವಾಡ
ಹೂಟ ಕಟ್ಟಿದಂತೆ ಬಡ

೧೦

ಜನದ ಕಾಟಕೆ
ತೋಟಗಾರನರಿತು ಸೆಡಕು-
ಗೊಂಡನು ದಿಟಕೆ.

೬

ದ್ರೋಹಿ ಹುವ್ವು ಹಿಗ್ಗುತಿತ್ತು
"ಜಾವಕೆಲ್ಲ ರಾಣಿ ಮುಡಿಯೊ
ದೇವರಡಿಯೊ ಬಾಲೆ ಜಡೆಯೊ
ಎನ್ನ ಮುಡಿವುದು.
ಜೀವಗೆಟ್ಟು ದುಡಿವ ಪಡೆಯೊ
ಬನ್ನ ದುಡಿವುದು."

## ಮತ್ತೆ ಚಿಗುರಿದೆ

೧

ಮತ್ತೆ ಚಿಗುರಿದೆ ಕವಲು ಗಂಟುಗ-
ಳೆತ್ತಲಿತ್ತಲು ಚಿಗುರಿದೆ.
ಮತ್ತೆ ಚಿಗುರಿದೆ ಇತ್ತ ಈಶನ
ಚಿತ್ತ, ಸುತ್ತಲು ಚಿಗುರಿದೆ.

೨

ಹುತ್ತ ಹುತ್ತಗಳಿಂದ ಜಿಹ್ವೆಗ-
ಳೆತ್ತಲಿತ್ತಲು ಎತ್ತಿ ಕೆದರಿ
ಸುತ್ತ ಹಿಣಕುವ ನಾಗಲೀಲೆಯು
ಚಿತ್ರ ಸೋಜಿಗ ಮತ್ತೆ ತೋರಿ!

೩

ಮತ್ತೆ ಚಿಗುರಿದೆ ಮುತ್ತು ವಿರಹಿಣಿ
ಅತ್ತು ದೇಹವ್ವೊ ತಾಂದಿರೆ

ಚಿತ್ರವಲ್ಲಭ ಬಂದು ಜೀವವೆ
ಹೊತ್ತಿ ಮಿಂಚಿತು ಎನುವರೆ !

೪

ಬೇಸಗೆಯ ಬೇಗೆಯಲಿ ಬೆಂದು
ಆಸರದ ಕೈ ಸೋತು ನಿಂದು
ಮಾಸಿ ಬರಬರಲಾದುದಿಂದು
ದೇಸಿಯೊಪ್ಪಿದ ತೋಟವಿಂದು !

೫

ಮತ್ತೆ ಲಚ್ಚಿಯ ಶ್ರಮವದೆಲ್ಲವು
ಗುತ್ತಿ ಗುತ್ತಿಯೆ ಚಿಗುರಿದೆ !
ಮುತ್ತು ಲಚ್ಚಿಯ ಭಾಗ್ಯವೆಲ್ಲವು
ಚಿತ್ತದಂತೆಯೆ ಚಿಗುರಿದೆ !

೬

ಸನ್ನಿಹಿತ ಮಧುಮಾಸ ಲೋಕಕೆ
ಸನ್ನಿಹಿತ ಹರ್ಷೋತ್ಸವ !
ಚೆನ್ನ ಲಚ್ಚಿಯ ಭ್ರಮೆಯ ಲೋಕಕೆ
ಸನ್ನಿಹಿತ ಪುಷ್ಪೋತ್ಸವ.

## ವಸಂತ ಸಮಾಗಮ

೧

ಮಂಜುಳ ಕಲರವ ರಂಜಿಪ ಬಾನು
ಮುಂಜಾನೆಯೆ ಮುಗುಳೊಡೆವ ಭ್ರಮ-ಸುಮ
ಸಿಂಜಿನಿ ಸಮ ಝೇಂಕರಿಸುವ ಮಧುಪಗ-
ಳಂಜದೆ ಕೂಡುವ ಪ್ರೇಮಿಗ-
ಳಿಂದ ವಸಂತ ಸಮಾಗಮ !

೨

ಚಲಿಸಿ ಸಮಾಗಮಕೊಲಿವಳು ಬಹ ಪರಿ
ಮಲಯಜ ಗಂಧ ಸಮೀರಣ
ಮೆಲ ಮೆಲನೆಯೆ ನಾಣ್ಭರದಲಿ ಎರೆದೆರೆ-
ದೊಲಿದರ ಸೊಕ್ಕಿಪ ಸಾದರ
ಮಲಯಜ ಮಧು ಮದ ಪೂರಣ !

೩

ಕುಸುಮಿತ ಕಾನನ ಸಮ ಶೋಭಿಪ ವನ
ಪ್ರಸರದಿ ಯಕ್ಷಿಯ ಸಂಭ್ರಮ !
ಮಸಗಿದ ಪುಷ್ಪ ವಸಂತ ಸಮೃದ್ಧಿಯು
ಒಸೆದೋಲಗಿಪಳು, ವೃದ್ಧಿಯು !
ಮಸೆವುದು ಚಿತ್ತದ ವಿಭ್ರಮ !

೪

ಅಜ್ಜನ ನವವರ್ಷೋತ್ಸವದುಡುಗೊರೆ
ಗೆಜ್ಜೆಯ ಕಟ್ಟಿದ ಮೇಖಲೆ.
ಲಜ್ಜೆಗೆ ತೊಡುವರೆ ಮುತ್ತು ಬುಲಾಕು
ಹೆಜ್ಜೆ ಜ್ಜೆಯನಿಕ್ಕುತ ಬರೆ ಸಾಕು —
ಗುಜ್ಜಾನೆಯೆ ಮದವ್ಯಾಕುಲೆ !

೫

ಇಡೆ ಹೆಜ್ಜೆಯ ಘಲ್ ಮೇಖಲೆ ಸದ್ದು !
ನಡೆವೊಯ್ಯಾರವೆ ನರ್ತನ !
ಮುಡಿವೂವಿಟ್ಟಾಭರಣದ ಮುದ್ದು !
ಕಡೆಗಣ್ಣಾಡಿಗೆ ಮೋಹನ !
ಅಡಿಯುಲಿಗೆ ಯುದ್ವರ್ತನ !

೬

ಅರಿಶಿನ ಕುಂಕುಮ ಪರಿಶೋಭಿತೆ–ಮೃದು–
ದರಹಾಸವ ವಿಕ್ಷೇಪಿಸೆ
ಅರುಹುವರಾರು ವಸಂತ ಸಮಾಗಮ
ವರವಾರದೊ, ನಿಕ್ಷೇಪಿಸೆ
ಸಿರಿಯಾರದೊ – ಪ್ರಕ್ಷೇಪಿಸೆ !

## ಉಯ್ಯಾಲೆ

೧

ಮರ ಮರಕೆ ಹಬ್ಬಿ ಹೆಣೆದಿಳಿದ ಬಳ್ಳಿಗಳಲ್ಲಿ
ಉಯ್ಯಾಲೆಯಾಡುತಾಳೆ
ಉಚ್ಚಿ
ನೆಲಚಿಮ್ಮಿ ನಿರಿಚಿಮ್ಮಿ ಪಿಕದ ಉಲ್ಲಸದಲ್ಲಿ
ಹಾಡೆತ್ತಿ ಹಾಡುತಾಳೆ
ಚಿಮ್ಮಿ
ಹಾಡೆತ್ತಿ ಹಾಡುತಾಳೆ

೨

ಮುಗಿಲೆಲ್ಲ ಕಳೆ ತುಂಬಿ ಬಣ್ಣ ಬಣ್ಣಗಳಲ್ಲಿ
ತೇಲುವುದ ನೋಡುತಾಳೆ
ಮೆಚ್ಚಿ
ಹಗುರಾದ ಬಗೆಯಿಂದ ಗಾಳಿಯುಲ್ಲಸದಲ್ಲಿ
ಹಿಂದಕ್ಕೆ ವಾಲುತಾಳೆ
ಚಿಮ್ಮಿ
ಮುಂದಕ್ಕೆ ತೇಲುತಾಳೆ

೩

ಉಲಿವ ಗಿಳಿ ಹಿಂದತ್ತ ಮರದ ಮೇಲೋಳಿಯಲಿ
ಹಾರಿ ಹರಿದುಲಿವ ವೇಳೆ
ಆಗ
ಹಿಡಿದ ಹಂಬನು ಬಿಟ್ಟು ಕೈಸನ್ನೆ ಮಾಡುತಲಿ
'ಬಾ'ಯೆಂದು ಕರೆಯುತಾಳೆ,
ಮನ
ಸೋಲುತ್ತ ಕರೆಯುತಾಳೆ.

೪

ಮಾಮರದಿ ಕೋಗಿಲೆಯೊ 'ಕೂ'ಯೆಂದು
ಹಾಡುವುದು,
ತಾ ಕೇಳಿ ಕೂಗುತಾಳೆ;
ಹಾಗೆ
ಹರಿದಾಡೆ ನಿರಿಗುರುಳು ಮಂದಮಾರುತದಲ್ಲಿ
ಬಾಗುತ್ತ ತೂಗುತಾಳೆ
ಮತ್ತೆ
ತೂಗುತ್ತ ಬಾಗುತಾಳೆ.

೫

ಹುವ್ ಹುವ್ಗೆ ಹಾರಿ ಹಾರುವ ಬಣ್ಣ ಬಣ್ಣಗಳ
ಚಿಟ್ಟೆಗಳ ಹಿಡಿವ ವೇಳೆ
ಕೈಯ
ಲಗು ತಪ್ಪಿ ಮುಗ್ಗುವುದು ಪ್ರಜ್ಞೆಯಿಲ್ಲದೆ ತಾನು
ಎತ್ತೆತ್ತಿ ಬೀಸುತಾಳೆ
ಮತ್ತೆ
ತತ್ತರಿಸಿ ಹಿಡಿಯುತಾಳೆ.

೬

ಮಡಿಲಲ್ಲಿ ಬಿದ್ದೊಂದು ಬಳ್ಳಿಹುವ್ವನು ಎತ್ತಿ
ಉಲ್ಲಸದಿ ಮುಡಿಯುತಾಳೆ
ಬೆಚ್ಚಿ
ಹಿಡಿದಂತೆ ಬಳ್ಳಿಗಳ ನಕ್ಕು ಕೇಕೆಯ ಹಾಕಿ
ನವಿಲನ್ನೆ ಮುಗಿಸುತಾಳೆ
ಮತ್ತೆ
ನಲವನ್ನೆ ನಗಿಸುತಾಳೆ

೭

ಬಾನೇರಿ ತೇಲುತಿಹ ಹದ್ದುಗಳ ಸ್ವೈರದಲಿ
ಬಾನ್ದಳವೆ ತೇಲುತಾಳೆ
ಮತ್ತೆ
ಬಾನಾಡಿಯಂತೆ ಸುಖಕಾಕಲಿಯ ಮೇಳದಲಿ
ತೇಲುತ್ತ ಹಾಡುತಾಳೆ
ಮತ್ತೆ
ಹಾಡುತ್ತ ತೇಲುತಾಳೆ.

೮

ಹುಣ್ಣಿಮೆಯ ಹೊಂಬೆಳಕ ನೋಡಿ ತುಂಬಿದ ವನದ
ಏಕಾಂತ ಭವ್ಯದಲ್ಲಿ
ಬಂದು
ಕಣ್ಗೆ ಕಾಣದೆ ಕುಳಿತು ವನದೇವಿಯುಯ್ಯಲಲಿ
ಹೊಂಬೆಳಕ ಕಾಂತಿಯಲ್ಲಿ
ಅಂತು
ಮೋಹಿನಿಯೆ ತೂಗಲಿಲ್ಲಿ!

೯

ಉಜ್ವಲದ ಹೊತ್ತಾರೆ ಮೆಲುಗಾಳಿ ತೂಗುತಿರೆ
ಹಿರಿದೊಂದು ಹುವ್ವಿನಲ್ಲಿ
ಕೆತ್ತಿ
ಉಜ್ವಲದ ಬಣ್ಣದುದು ಮುದ್ದಾದ ಮಧುಪ ಮೊರೆ-
ಯುಳಿದೆತ್ತಿ ಮಧುವನಲ್ಲಿ
ಅಂತು
ಮೆಚ್ಚಾಗಿ ತೂಗಲಿಲ್ರಿ !

೧೦

ಭಾವಸಾಗರ ಹಿಗ್ಗಿ ಜೀವನದ ಹುಣ್ಣಿಮೆಗೆ
ಹುಚ್ಚೆದ್ದು ಕುಣಿಯುವಲ್ಲಿ
ಜೀವ
ಚಂದ್ರಬಿಂಬವದೊಂದು ಉಯ್ಯಾಲಿದೂಗುತ್ತ
ಬಾನ ಮುತ್ತಿಕ್ಕುವಲ್ಲಿ
ಅಂತು
ಮೋದವನು ಕಾಣಲಿಲ್ರಿ !

೧೧

ಅವಳೊ ಚಿಂದಿಯನುಟ್ಟ ಬಡವೆ, ಆದರು ಚೆಲುವೊ
ಮುದ್ದಾಟವಾಡಿತಲ್ಲಿ ;
ಅಂತೆ
ಅದುರಿ ಗಾಳಿಗೆ ಚಿಂದಿ, ಅಲ್ಲಿ ಕಂಡುತ್ಸವವೊ
ಉಯ್ಯಾಲೆಯಾಡುವಲ್ಲಿ
ಬಾಳೆ
ಉಯ್ಯಾಲೆಯಾಯಿತಲ್ರಿ !

೧೨

ಭಾವಸಾಗರ ಜೀವ ಹುಣ್ಣಿಮೆಗೆ ನೆರೆಯೆದ್ದು
ವಿಕ್ಷುಬ್ಧವಾದ ವೇಳೆ
ಜೀವ
ಬಾನ್ಮಿಂಚಿ ಮೆರೆವಲ್ಲಿ ತೆರೆಮೇಲೆ ತೇಲಾಡಿ
ತೂಗದಿಹ ಬಾಳು ಬಾಳೆ
ಎಂದೆ,
ತೂಗಿದಳು ಮತ್ತೆ ಬಾಲೆ!

## ಹೂವಾಡಿಗಿತ್ತಿ—ಕವಿ

೧

ಹೂವಾಡಿಗಿತ್ತಿಗೂ ಹಾಡು ಕಟ್ಟುವ ಕವಿಗು
ಸಂಬಂಧ ತುಂಬ ಹೆಚ್ಚು,
ಇಬ್ಬರೂ ಕಟ್ಟುವರು, ಇಬ್ಬರೂ ಹಾಡುವರು,
ಮಧುಮಾಸಪಿಕದ ಹುಚ್ಚು!

೨

ಒಂದೆ ಅಂತರ ಅವರ ನಯವಾದ ಬಾಳ್ಗಳಲಿ,
ಭಾವ—ಭ್ರಮೆ ಹಿಗ್ಗಿನಲ್ಲಿ
ಅವನೊ ಹಾಡುತ ಕಟ್ಟಿ, ಅವಳೊ ಕಟ್ಟುತ ಹಾಡಿ,
ನೀಗುವರು ಬಾಳಸಿಲ್ಲಿ

೩

ಹೂವಾಡಿಗಿತ್ತಿಗೂ ಹಾಡಿ ಹಾಡುವ ಕವಿಗು
ಅಂತರವೊ ತುಂಬ ಹೆಚ್ಚು,
ಅವಳೊ ಕಾರ್ಪಣ್ಯ-ಕಷ್ಟದಿ ಭ್ರಮಿಸಿ, ಅವನಂತೆ
ಭ್ರಮೆಯಲ್ಲಿ ದುಡಿವ ಹುಚ್ಚು.

೪

ಆದರೂ ವಿಧವೊಂದೆ ಅವರ ವ್ಯದು ಬಾಳಿರದು,
ಇಬ್ಬರೂ ಎಲ್ಲ ಮರೆತು
ಭ್ರಮಿಸುವರು-ನೋಯುವರು, ನೋಯುವರು-
ಭ್ರಮಿಸುವರು ;
ಇಬ್ಬರಿಗು ಸುಖವೆ ಹೊರತು.

## ಅಪ್ರತಿಭಾ

೧

ಗಂಧರ್ವ ಬಾಲೆಯುಂತಡ್ಡಾಡುತಿದ್ದಳವ-
ಳಾ ತೋಟ ಮಧ್ಯದಲ್ಲಿ.
ನಿಂದಂತೆ ಕಣ್ಣಾರಕಂಡು ಆನಂದಿಸಲು
ರಂಬೆಯೂ ಬದುಕನಲ್ಲಿ
ಬೆಂಬಳಿಯೆ ಸರಿದೆನಲ್ಲಿ.

೨

ಚಿಂದಿಚಿಂದಿಯನುಟ್ಟು, ಬುಟ್ಟಿಯಲಿ ಕೂಳಿಟ್ಟು-
ಬಂದಿಳಿವ ಬೆವರನಿಟ್ಟು
ಒಂದೆಸಮ ಆ ತೋಟ ಮಧ್ಯ ದುಡಿ ದುಡಿಯುತ್ತ
ಕಣ್ಣೆರೆದು ಸುಯ್ಲನಿಟ್ಟು
ಕಂದಿದಳು ಬಳಲಿ ಕೆಟ್ಟು.

೩

ತುಂಬಿ ಬಂದಿರುಳಲ್ಲಿ ಸೋದರ ಮುಂದೊಂದು ಸೊಡ-
ರಂತೆ ಗರಿಗೂಡಿನಲ್ಲಿ
ಕಣ್ಯಾಬಾಲಕಿಯಂತೆ ನಿರಿಗುರುಳ ವೇಷ್ಟಿಯಲಿ
ಬಿಂಬಿಸಿದಳಂದದಲ್ಲಿ
ಚೆಂದುಟಿಯ ತಾರೆಯಲ್ಲಿ.

೪

ಮೆಲುಹೆಜ್ಜೆ ಕಳ್ಳನಾಗೊತ್ತಿನಡೆದೆಡೆನಿಂತು
ನೋಡಿದೆನು , ಬದ್ಧ ಭ್ರುಕುಟಿ,
ಬಿರುಸುಯ್ಲು, ಇಲಿ, ತಿಗಣೆ, ಸೊಳ್ಳೆ, ನೆಲ ತೇವಗಳ
ಕಾಟಕ್ಕೆ ಅರ್ಧ ಕೆಟ್ಟು –
ನಿದ್ರೆ, ಕನಸಾಯ್ತು ಚಿಟ್ಟು.

೫

ಸಂಪಗೆಯ ಬುಡವೆದ್ದು ಪೀಠವನು ಕಲ್ಪಿಸಿರೆ
ಸಂಪಗೆಯ ನೆರಳಿನಲ್ಲಿ
ಸಂಪನ್ನ ಶಿಲ್ಪಕಲೆಗಂತೆ ಸೋತೊಂದು ಶಿಲೆ
ನೋಂಪಿಯನು ಸಲಿಸುತಲ್ಲಿ
ಕಂಪಿಸಿತು ಚಿಂತೆಯಲ್ಲಿ

೬

ಬಳಿಗೈದಿ ಏಕೆನಲು " ಮೂರುದಿನ ಹಿಟ್ಟಿಲ್ಲ
ಎನ ಅಜ್ಜ ರೋಗಿಯಲ್ರಿ ,
ಕೊಳಲಿಲ್ಲ, ವೂರಿಲ್ಲ, ಹುವ್ ಕಟ್ಟಲಿಲ್ಲ , ಎನ
ಮುದುತೋಟ ಕೆಡುವುದಲ್ರಿ "
ಎಂದಳತಿ ಖೇದದಲ್ಲಿ

೭

ಚಿಂತೆ ಕಳೆದಂತೆ ನಾ ಸಂಪನ್ನ ತಿರುಗಿದೆನು
ಪಟ್ಟಣಕೆ ಚಿಂತಿಸುತಲಿ
ನೂರಾರು ಲಚ್ಚಿಯರು ನರಳುತಿದ್ದರು ಎನ್ನ
ಭ್ರಾಂತಿ – ಸಾಮ್ರಾಜ್ಯದಲ್ಲಿ,
ಬಾಳ ಸವಿ ಕೆಟ್ಟಿತಲ್ಲಿ.

೮

ಜೀವ ವೈಭವದಲ್ಲಿ ಬಾಳ ಹುರಿದುಂಬಿಸಲು
ನಡೆದೆ ನಾ ರಾಜಗೃಹಕೆ.
ಉತ್ಸವವೊ ಹುಚ್ಚೇಳುತಿತ್ತು ಎತ್ತೆತ್ತಲೂ.
ಭ್ರಾಂತಿಯೆಂತಂತೆ ಸುಖಕೆ,
ಕ್ರಾಂತಿಯೂಯ್ಯುಲ್ಲಸಕ್ಕೆ.

೯

ವೈಭವವೊ ಇಟ್ಟಾಡಿ, ಜೀವನವೊ ಅತಿಗಾಡಿ;
ಭ್ರಮೆಗಳಿಗೊ ಬರಿಯ ಮೋಡಿ!
ನಡೆಸೋಲ್ವ ಗಜಗಮನೆ, ದಡಿಮ್ವೈಯ ತೇರುಗಳು,
ಹೊಗಳಿ ಹೊಡೆ ಹೊರೆವ ಖೋಡಿ
ಜನಗಳೆಡೆ ಜಾತ್ರೆಮಾಡಿ

೧೦

ತೂಗಿದರು, ಮಲಗಿದರು, ಇಲ್ಲ ಹೊಡೆ ಕೂರಿದರು,
ಬಿಡುವಿಲ್ಲ ಕವಟೆಗಳಿಗೆ;
ಇಲ್ಲ ವೈವಾಹಿಕದ ದುಶ್ಚಟಗಳೆಸಗಿದರು;
ತಣಿವೆ ಕಾಮಾರ್ಥಿಗಳಿಗೆ?
ಗುಣವೆ ಕವಿ–ಮಾಗಧರಿಗೆ?

೧೧

ಕವಿ ಕಾಳಿದಾಸ ಬಾಣರು ಕೆಟ್ಟರಲ್ಲಿ ಬಿಡಿ;
ನಾ ಕಂಡೆ ಉತ್ಸವದಡಿ
ತಲೆಕೆದರು ಗೀಜುಗಣ್ ಕೊಳೆಚಿಂದಿಯುತ್ಸುಕವೊ
ಹಸಿದಿದ್ದು ಹಿಗ್ಗಿ ಓಡಿ
ಕುಸಿದಿತ್ತು, ಬಾಳೆ ಸೋಡಿ.

# ಮೃತ್ಯು ಶಯ್ಯೆ

೧

ಏಕಾಂತದಿರುಳಿನಲಿ ಏಕಾಂತಪರ್ಣಕುಟಿ-
ಯೇಕಾಂತ ಮೌನದಲ್ಲಿ
ಏಕಾಂತ ದೀಪಪ್ರಭೆ ಛಾಯೆಯಲಿ ಶೋಕಾಂತ
ಕಂಡರಿಸಿತಾಸೆ ಚೆಲ್ಲಿ.

೨

ದುಃಖವೂ ನಿರಾಶೆಯೋ ತತ್ತರಿಸಿ ಹೋಗಿತ್ತು,
ಮಿಣುಕು ತಾರೆಗಳ ಸಾಕ್ಷಿ
ದಿಕ್ಕಿಲ್ಲದಿದ್ದ ಕತ್ತಲು ಬೆಚ್ಚಿ ಕವಿದಿತ್ತು,
ಹಿಣುಕಿತ್ತು ಜವನ ಅಕ್ಷಿ.

೩

ಜರೆಜೀವ ಸೊರಗಿಬಿದ್ದಿತ್ತು, ಬಿಕ್ಕಳುತಿದ್ದ
ಮೊರೆ ಮೆಲನೆ ಕೇಳಿಸಿತ್ತು,
ಬರಿದಿಕ್ಕುಗೆಟ್ಟಿರುಳು, ದಿಕ್ಕಿಲ್ಲದಳುತಿದ್ದ
ಕರುಜೀವ ಕಾವಲಿತ್ತು

೪

ನಿಬ್ಬರ ನಿರಾಶೆಯಿಂದೆತ್ತಿ ಕಂಬನಿಕಣ್ಣ-
ನರೆಜೀವ ಕೊರಗುತಿತ್ತು,
ಒಬ್ಬಳೆ ಅನಾಥೆ ಅಂತಹ ದಿಕ್ಕುಗೆಟ್ಟಿರುಳು
ದಿಕ್ಕುಗಡೆ ನೊಂದು ಕರುಳು.

೫

ನರೆದಾಡಿ ನೀರಾಯ್ತು, ಜರೆಬಾಳು ಗೋಳಾಯ್ತು ;
ಕರ ಅದುರಿ ಗಲ್ಲ ಹಿಡಿದು
ಕಿರಿಹೆಣ್ಣ ಸಿರಿಮೊಗವ ಪರಿಕಿಸುತ ಇನ್ನೊಮ್ಮೆ
ಜರೆಜೀವ ಹೋಯ್ತು ದುಡಿದು.

೬

ತಾನೊಂದೆ ದಿಕ್ಕೆಂದು ಶಾಶ್ವತಿಯ ಬಯಸಿದ್ದ
ಆ ನೊಂದ ಬಾಳೊ ಗೋಳೋ !
ಏನೊಂದು ಕಂಟಕವು ತನ್ನ ದಿಕ್ಕಾಗಿದ್ದ
ಬಾಳ್ಗೆ ಬರದೆಂದ ಹಾಳೋ !

೭

ಭ್ರಮೆಯೆರಡ ಜೀರಿ ಕದ್ದೊಯ್ದ ಜವ, ಕಡುಪಾಪಿ !
ಮಾಡಿಟ್ಟ ಗಂಜಿ ಕೇಡು !
ಭ್ರಮೆ ಕೇಡು ! ಅಷ್ಟು ದಿನ ಮಾಡಿದೆಲ್ಲವು ಕೇಡು !
ಕೂಡಿಟ್ಟ ಗೋಳುಪಾಡು !

೮

ಹರಕು ಕಂಬಳಿ, ಜೂಲು ಹಾಸಿಗೆಯೊ ಬಿದ್ದಿತ್ತು ;
ಹೆಣವೂ ಅದಕಿಂತ ಮಿತ್ತು.
ಬರಿ ನೆನಸು ಆ ಬಣಬೆ ಮೇಲೆ ಹೊರಳಾಡಿತ್ತು
ತನದೆಂದು ಅತ್ತು ಅತ್ತು !

೯

ಅಂತು ಆ ಏಕಾಂತದಿರುಳಿನಲಿ ಏಕಾಂತ
ಪರ್ಣಕುಟಿ ಮೌನದಲ್ಲಿ
ಏಕಾಂತ ದೀಪಪ್ರಭೆ ಛಾಯೆಯುಲಿ ಶೋಕಾಂತ
ಕಂಡರಿಸಿತಸುವ ಚೆಲ್ಲಿ.

೨೩

## ದುಃಖಿ

೧

ಸಂಪಿಗೆಯು ಮರವ ಹಿಡಿದು
ಕಂಪಿಸುವ ತುಟಿಯು ತಡೆದು
ಬಿಕ್ಕಿಬಿಕ್ಕಳಿಸುತ್ತ ದುಃಖದಲಿ ಗಳಹುತ್ತ
ದಿಕ್ಕುಗೆಟ್ಟಳುತಲಿಹಳು
ದುಃಖಾರ್ತೆ ಬಾಲೆಯುವಳು

೨

ಶಿಲೆಯಂಥ ತೋಳಲೊತ್ತಿ
ಕಲೆಯ ಕಣ್ ಮೊಗವೊ ಬತ್ತಿ
ಸೊಕ್ಕಿಹುದು ಮೊಗ, ನೆತ್ತಿ ಸುಕ್ಕುಗಟ್ಟಿದೆ ಸುತ್ತಿ,
ಕಗ್ಗತ್ತಲೊಡ್ಡು ಮುಂದೆ,
ನೆಗ್ಗಿದ್ದ ನೆಚ್ಚು ಹಿಂದೆ.

೩

ತುಂಬಿದ್ದ ಪೃಥ್ವಿ ಶೂನ್ಯ!
ಲಂಬಿಸಿದ ಸ್ವರ್ಗ ಶೂನ್ಯ!
ಬೆಂಬಳಿಯೆ ಮಣ್ಮಾಡಿ ನೆಟ್ಟೊಂದು ಮಲ್ಲಿಗೆಯ
ಹಂಬಿತ್ತು ಭ್ರಾಂತಿಜನ್ಯ,
ತುಂಬಿತ್ತು ಆಸೆಶೂನ್ಯ!

೪

ನಿರ್ಜನವನಾಂತವಾದ
ನಿರ್ಜೀವ ದ್ವೀಪವಾದ
ಕರೆನೊರಜು ಗಲ್ಗಳೆಡೆ ಬಿರುಗಾಳಿ ಬಡಿದಿಕ್ಕಿ
ತೆರೆಗಳಲಿ ಕೊರಗುವೊಂದು
ಮುರಿದ ಹುವ್-ನೌಕೆಯೊಂದು?

೫

ತುಂಬಿತ್ತು ಬಾಳ್-ವಿರಕ್ತಿ !
ತುಂಬುರೋಧನವೆ ಮುಕ್ತಿ !
ಎಂಬಿನೇ ದುಃಖ ಸಿರ್ವೇಗದಲಿ ಸರಿದಿದ್ದ
ಕುಪ್ಪಸದ ಕಳೆಯು ನೋಡಿ
ಬೆಪ್ಪಾಗಿ ನಿಂತ ಖೋಡಿ !

೬

ದಿಕ್ಕಿಲ್ಲದಬಲೆಯುವಳು;
ದಿಕ್ಕುತಾನೆಂದ ಮರುಳು !
ದುಃಖದಲಿ ಏನೊಂದ ಲೆಕ್ಕಿಸದೆ ಬಿಕ್ಕಿದಳು
ಕಕ್ಕುಲಿತೆ ಮಿಕ್ಕು ಅವಳು,
ದುಃಖಾರ್ತೆ ಬಾಲೆಯುವಳು

## ವಿಡಂಬನ

೧

ಶ್ರೀಮಂತ " ಮಾಂಸ ಬಿಸಿರಕ್ತಗಳ ಮಾರಿಕೊ,
ಸಿರಿಸುಖಗಳಿಡುವೆನೆಂ "ದ.
ಧೀಮಂತೆ " ಮಾಂಸ ಬಿಸಿರಕ್ತಗಳೊ ಶೋಷಿಸಿವೆ,
ಸಿರಿ-ಸುಖವ ಸುಡು " ಎಂದಳು.

೨

ಶ್ರೀಮಂತ " ಮತ್ತೆ ಚೆಲುವೆಲ್ಲವನು ಪೋಷಿಸುವೆ,
ಬಾ ಎನ್ನ ಹಿಂದೆ " ಎಂದ.
ಧೀಮಂತೆ " ದೈವವಿತ್ತುದೆ ಇದಕೆ ಸಿರಿ ನಿನಗೆ,
ಚೆಲುವೆನಗೆ,-ಸುಡು " ಎಂದಳು,

೩

ಮತ್ತೆ ಆ ಶ್ರೀಮಂತ ಸಿರಿಯೆಲ್ಲ ತೆರೆದಿಟ್ಟು,
ಹೃದಯವನು ಬಿಚ್ಚಿ ಹೇಳಿ,
" ಅಂತು ಅಗ್ಗವೆ ಸಿರಿ ? ಅಂತಮೂಲ್ಯವೆ ಶೀಲ ?
ಕಾಡದಿರು ಬಾರೆ" ಎಂದ.

೪

" ಇದಕಾಗೆ ಎನ್ಮನೀ ಕಾರ್ಪಣ್ಯದಲಿ ತುಳಿದು
ಮೆರೆವ ಸಿರಿ ನರಕ-ರೊಚ್ಚು !
ಮದದಾಸೆ ಇಂತಿಡುವ ರಕ್ತ ಮಾಂಸಗಳೊ ವೈ-
ತರಣಿಯಾ ಕೊಳಚೆ-ಹುಚ್ಚು ! "

೫

" ಎರಡು ಬಾಳನು ನೀಚ ನರಕಕೆಳೆಯುವುದಾಗಿ
ಸುಡಲಿ ಸಿರಿ, ರಕ್ತ, ಮಾಂಸ !
ಸುಡಲಿ ದೈವದ ಖತಿಯ ಜ್ವಾಲಾಮುಖಿಗೆ ಬಿದ್ದು !
ಹೋಗು-ಆಡದಿರೆಂ "ದಳು

೬

ಮತ್ತೆ ನಾ ಅವಳ ಕಷ್ಟವ ಕಳೆಯೆ ಹಣಕೊಂಡು
ಹೋದಾಗ ದೀನೆಯಾಕೆ
ಹತ್ತುವರ್ಷದ ಹೆಣ್ಣು ಅತ್ತ ಹಾಗತ್ತು ಅದ
ಬೇಡೆಂದು ನುಡಿದಳಾಕೆ.

೭

ಕಾರಣವ ಕೇಳಿ, ವೃತ್ತಾಂತ ಹೇ"ಳೀ ಪಾಪ-
ಮಧ್ಯಸ್ಥ ಸಿರಿಯುದೇಕೆ ?
ಘೋರವೀ ರಕ್ತ, ಮಾಂಸದ ಚೆಲುವು" ಎಂದಳು
ಆದ್ಯಂತ ತಪಿಸುತಾಕೆ

೮

“ ಕವಿಭಾವ ಪರಿಶುದ್ಧ. ಶುದ್ಧಮನಸಿನ ದಾನ
ಹಿತ ನಿನಗು–ಎನಗು” ಎಂದೆ.
ಲವಲವಿಕೆಗೊಂಡು ಮೃದು ಹಸ್ತಗಳ ನೀಡಿದಳು.
ನಾ ತಣಿದು ನೀಡಿ ಬಂದೆ.

## ಸ್ವಾಗತ

೧

ಹೂವಾಡಿಗಿತ್ತಿಯೆ ಬಾ ಆಡಿಕೊ ಬಾ,
ಹೂವಿನ ತೋಟಕೆ ಹಾಡಿಕೊ ಬಾ.
ಹೂವಿನ ತೋಟವೊ ನನಗೊಂದಿದೆ ಬಾ,
ಹೂವಿದೆ ಆ ತೋಟದ ತುಂಬ.

೨

ಮಧುಮಾಸವೊ ವಂಚಿಸಲಿಲ್ಲೆಂದೂ,
ಮಧುರ ಮಧುರ ಭಾವದ ಬಂಧು.
ಮಧುಮಂಜುಳ ಕಲರವವೇ ಎಂದೂ,
ಮುದುಮುದು ಬಣ್ಣಗಳಿಹ ಸಿಂಧು!

೩

ಭ್ರಮರವಾಗಿ ಬಾ, ಭ್ರಮಿಸಿ ಭ್ರಮಿಸಿ ಬಾ;
ಕವಿ ಹೃದಯದ ಭ್ರಮೆಯಾಗಿ ಬಾ.
ಭ್ರಮೆ ಭ್ರಮೆ ಬಣ್ಣದ ಓ ಭ್ರಮರಿಯೆ ಬಾ,
ಭ್ರಮೆ ರಮಿಸುತ ಝೇಂಕರಿಸುತ ಬಾ.

೨೭

೪

ಮಧುವೆಲ್ಲವ ತೊಟ್ಟಿಲ್ಲದೆ-ಕುಡಿ ಕುಡಿ
ಮಧುಪಾತ್ರದ ಒತ್ತಿಗೆ ಹಾಡಿ.
ಮಧುರ ಕುಸುಮ ಜೀವನಕದೊ ಗಾಡಿ,
ಮಧು ಮಕರಂದಕೊ ಬಲು ಮೋದಿ ,

೫

ಮಕರಂದ ಪರಕಲಿಸು ಮೃದು ಚದುರ ಕಾಲ್ಗಳಲಿ
ಮಿಕ ಮಿಕನೆ ಮೆರಗುವಾ ರೆಕ್ಕೆಗಳಲಿ,
ಸುಖವಾಗಿ ಚೆಲ್ಲಿ ಎರಚಾಡು, ಒಂದೊಂದರಲಿ
ಶ್ರುತಿಗೀತೆಯೊಂದೊಂದು ಹುಟ್ಟುತಿರಲಿ.

೬

ಮತ್ತೆ ಭ್ರಮಿಸುತ ಹುವ್ವು ಹುವ್ವಿಗೆ
ಮತ್ತ ಮಧು ಝೇಂಕಾರಕೆ
ಸುತ್ತ ಕ್ರಾಂತಿಗೊಂಡೆನ್ನ ಜೀವಕೆ
ನಿತ್ಯ ಉತ್ಸವ ಮಾಡು ಹಾಗೆ.

೭

ಮತ್ತೆನಗಾ ಮಧು ನಿನಿಸನು ನೀಡೆ
ಎತ್ತಿದ ಹೂವೆಲ್ಲದರಿನಿಸ.
ಮತ್ತ-ಮಧುರ ಸುರ ಜೀವದ ಪಾಡೆ
ಒತ್ತಿ ಮಧುರ ಹಾಡುವೆ ನೋಡೆ.

## ಸುಖಾಗಮನ

೧

ಬರುತಿದಾಳೆ ಬರುತಿದಾಳೆ
ಬರುತಿದಾಳೆ ಲಚ್ಚುಮಿ !
ಬರುವಳಮರ ಬಾಲೆಯೊಲೇ,
ಬರುವಳೆನ್ನ ಮೆಚ್ಚುಮಿ !

೨

ಭ್ರಮರಗಳೇ ದಾರಿ ಬಿಡಿ.
ವಿಹಗಗಳೇ, ನೋಡಿ ನೋಡಿ
ಸುಮದ ಸುರಭಿ ಪ್ರಾಂತದಿಂದ,
ಗಹನ ಶಾಖೆ ಶಾಖೆಯಿಂದ !

೩

ಕಾಳಿ ಬಾಲೆ ರೂಪ ತಾಳಿ
ಕೇಳಿ ಮಿಗಿಸುವೊಲೇ ಆಳಿ
ಬೀಳು ಎದೆಯ, ಹಾಳು ಮನವ
ಬಾಳುಗೊಳಿಸಿ, ಭ್ರಮೆಯಗೊಳಿಸಿ !

೪

ಹರಯ ಬರಿದೆ ಕಳೆವುದಲ್ಲ ;
ತರದ ಚೆಲುವು ಬಿಡುವುದಲ್ಲ,
ವಿರಮಿಸೆ ದೊರಕೊಳ್ವುದಲ್ಲ
ತರದ ನೋಟ, ಉರದ ಬೇಟ !

೫

ಬರುತಲಿಹುದು ತಿಳಿಯಲಿಲ್ಲ ?
    ಸರ, ಮೆಲುಸರ, ಗೊಲಸದಲ್ಲ ?
ಬರಿಯ ಹಿಗ್ಗು ಎದೆಯುಲಿಲ್ಲ !
    ನೆರೆಯೆದ್ದಿದೆ ಜೀವವೆಲ್ಲ !

೬

ಅತ್ತಣಿಂದ ಬರುವ ಗಾಳಿ
    ಮೆತ್ತ ಮೆತ್ತನೆಯೇ ಸೋಕಿ
ಮತ್ತ ಪ್ರಣಯಿನಿಯೋ ಕೇಳಿ
    ಗೊತ್ತಿ ಸೋಂಕಿದಂತೆ ಕುತುಕ !

೭

ಭಾವ-ಭ್ರಮೆಗಳೆಲ್ಲ ತುಂಬಿ
    ಜೀವವೆಲ್ಲ ಮೋಹ ತುಂಬಿ
ಯಾವೊ ಪರಮಪದವ ನಂಬಿ
    ನೇವವಿಹುದು ಮದ ವಿಳಂಬಿ !

೮

ಏನೋ ಹರ್ಷ ಏನೋ ತೃಪ್ತಿ
    ಮೌನ ನಿಂತ ಸುಖದ ವ್ಯಾಪ್ತಿ !
ಬಾನವರೆಗು ಹಿಗ್ಗಿ ಜೀವ
    ಗಾನ ಸುಖಕೆ ಸೋತ ಸುಪ್ತಿ !

೯

ಬಂದಳಗೋ ಬಂದಳವಳು
    ಚಂದದೆನ್ನ ಭ್ರಮೆಯುವಳು !
ಬಂದು ಭಾವಶೂನ್ಯ ವನವ
    ನಂದನವನಗೈವಳು !

೩೦

# ಎನ್ನ ಲಚ್ಚಿ

೧

ಎನ್ನ ಲಚ್ಚಿ ರಸ ಋಷಿ
ಮಧುರ ಭಾವ ತೋಷಿ
ಪ್ರಕೃತಿ ಕಳೆಗಳಿಂದ ಶೃಂಗ
ರಾದ ನವ್ಯ ವೇಷಿ.

೨

ಎಳೆಯ ತಳಿರು ಅವಳ ಕೈಗೆ
ತೋಳ್ಗೆ ಬಳೆ–ವಂಕಿ
ಸುಳಿವ ಕರುಳ ಕಳೆಯ ಕಣ್ಣ
ಮೋಹ ಮಯ ಶಶಾಂಕಿ!

೩

ಕಾಲ ಗೊಲಸು ಮುಗುಳು ತುಂಬಿ
ನಳ ನಳಿಸುವ ಬಳ್ಳಿ.
ನಳಿನ ಸಮೆ, ಮೃಣಾಲ ಮೃದುಲೆ!
ಬನದ ಮಿಂಚು ಬಳ್ಳಿ!

೪

ಗಿಳಿಗಳಾಡುವವಳ ಕೈಲಿ;
ಅವಳೊ ನವಿಲಗೌಳಿ
ಅವಳ ಪಾಡಿಗವಳೆ ಹಾಡಿ
ಪಿಕದವೊಲೇ ಬಾಳಿ.

೫

ನೋಟಕಿಲ್ಲ ಭೇಟಕಿಲ್ಲ.
ನೋಂಕುವೊಂದಕಿಲ್ಲ,

ಮಾಟಗಾರ್ತಿ, ಮೋಡಿಯೆಲ್ಲ !
ಕಲ್ಪನೆಗೂ ಚೆಲ್ಲ !

೬

ರಾತ್ರಿ ರಾತ್ರಿ ಗಗನವೆಲ್ಲ
ಮೌನ ಧ್ಯಾನಿಪಾಗ
ಪಾಡಿ— ಕೂಡೆ ಬಂದು ಕುಳಿತು
ತಾನ ಕೊಡುವಳಾಗ !

೭

ಕಲ್ಪ ಕಲ್ಪವಳಿದು ಅವಳು
ಅಂದು ಯಕ್ಷ ಬಾಲೆ !
ಕಲ್ಪನೆಯೇ ಬಣ್ಣಿಸದು !
ಅವಳೊ ಸುಗುಣಶೀಲೆ !

## ಲಚ್ಚಿ ಸುಂದರಿ

ಅದೊ ಅನಿರ್ವಚನೀಯ ಸೌಂದರ್ಯ ಲಚ್ಚಿಯದು !
ಮಲಿನಗೊಳಿಸವು ಅವಳ ಕಾಲ— ಉಪಭೋಗಗಳು
ಕವಿ ಕಂಡ ಸವಿಗನಸಿನಂತೆ ಆಕೆಯ ಬಾಳು !
ಭ್ರಮೆಯೆನ್ನ ಸುಂದರದ ವನದ ಒಂದೆಡೆ ಕುಳಿತು
ಮುಕ್ತ ಆತ್ಮದವೊಲೇ ತನ್ನ ಬಾಳ್— ಆನಂದ
ತಾನೆರೆವುದೇಕಾಕಿ ! ಹಕ್ಕಿ ಪಕ್ಷಿಗಳೆಲ್ಲ
ಮೌನ ಮಿಗೆ ಕೇಳುವುವು ! ನಾ ಮರೆಸಿಕೊಂಡೆಲ್ಲ
ನೋಡುವೆನು ಕೇಳುವೆನು ! ಸೊಕ್ಕುವುದು ಎದೆ ಅಂತೆ
ಅತಿಯಾಗಿ ಮಿತಿಮೀರಿ ಮಧುವ ಕುಡಿ ಕುಡಿದಂತೆ !
ಕಾಣುವೆನು ನಾನಲ್ಲಿ ಅಳಕೆ ನಿರ್ಮಿಸಿದಂತೆ !

# ಬಂಧ ವಿಮುಕ್ತೆ

೧

ಬಂಧವಿಮುಕ್ತ ಮಾತೆಯಿಗೊ !
ಕಣ್ದೆರೆವಳ ಮುದು ಸೇದೆಯಿಗೊ !
ಬಂಧುರ ಪಲ್ಲವ ಶೃಂಗಾರಿಣಿ — ಮಧು
ಮಂದರ ಸುಂದರ ಶುಭೆ — ಕೋಮಲೆಯಿಗೊ !

೨

ಶಾಪವಿಮೋಚಿತೆ ಅಹಲೆಯು ಉಪಮವೆ
ನೂಪುರ ಮೃದುಸ್ವನ ಮೃದುಲುಲಿತೆ !
ವ್ಯಾಪಿತ ಶೃಂಖಲ ವಿಚ್ಛೇದಿತೆ — ಸುಮ
ರೂಪಿಣಿ, ಸಂಭಾವಿತೆ, ಲಲಿತೆ !

೩

ದೀರ್ಘ ವಿಳಂಬಿತ ಬಂಧನ ಹಿಂಸಿತೆ !
ದೀರ್ಘೋಚ್ಛ್ವಾಸ ವಿಮೋಚಿತೆ — ನಿ
ರರ್ಗಳ ಭಾಷ್ಪನಿವಾರಿತೆ ಬದ್ಧ ಅ—
ನರ್ಘ ಸುಲಕ್ಷಣ ಭ್ರೂ ಸ್ಫುಟಿತೆ !

೪

ಅಹಿತರೊ ತೊಡವೆಲ್ಲವ ಅಪಹರಿಸಿ
ಮಹಿಯಲಿ ಬಂಧಿಸಿ ಬಿದ್ದವತರಿಸಿ
ಮಹಿಮಳ ವಸ್ತ್ರಾಲಂಕಾರವೊ ನಶಿ
ಸಹ ಕೆಟ್ಟಿದೆ, ದೀನಳೆ ಅಪ್ಸರಸಿ !

೫

ಅರೆತಾಯ್ ಬಿಂಕದಿ ಅರೆವೆಣ್ — ನಾಣಲಿ
ಬಿರಿಗುರುಳಿನ ರಾಶಿಯುನೋ, ಜಾರಿದ
ಸೆರಗನೊ ಸರಳವಿಲಾಸಿನಿ ಕೋದಿ
ಸರಿಯಾ ಗೋರಂತೆಳೆದುಕೊಳ್ವಳು !

೬

ನವಬಂಧನ ನಿಸ್ತರದಲಿ ಪಲ್ಲವ
ನವ ಕೋಮಲಕರ ಅದಿರುತಿದೆ !
ಭುವನ ಮನೋಹರೆ ಬೀರುವ ಮೃದುಹಾ —
ಸವೂ ನಾಣ್ ಭರದಲಿ ಮುದುರುತಿದೆ !

೭

ಮುಗ್ಧೆಯೊಲೇ ತಾ ಭ್ರಮ ಸಂಭ್ರಮದಲಿ
ಸ್ನಿಗ್ಧವೆ ಚಲಿಸುವ ಚಪಲವಿಗೋ — ಸಂ-
ದಿಗ್ಧ ಕರೋರದಿ ಅಡಗಿದ್ದಿಷ್ಟು
ಮುಗ್ಧವೆ ಮುಕ್ತಿಗೆ ಭ್ರಮಿಸುವಳು !

೮

ದೈನ್ಯದ ಈ ವೇಷದಿ ಮಾತೆ
ದೈನ್ಯವೆ ತಲೆಯೆತ್ತಿಳು ಪ್ರೀತೆ
ಮಾನ್ಯಳ ಮೋಹದ ಆಸುರದಿ
ದೈನ್ಯವೆ ನಿರುಕಿಪ ಸುತರಿದಿರೆ !

೯

ಅಂಜುತ ಅಳುಕುತ ನೋಡುವಳು
ಝುಂಜಾನೆಯು ಬಿರಿವಹಿಸಿನೊಲೆ ;

ರಂಜಿಪ ಮೃಗ ಚಪಲಾಕ್ಷಿಯಿಗೊ !
ಅಂಜನ ಹಚ್ಚಿದ ಮೋಡಿಯಿಗೊ !

೧೦

ಕಟು ಶೃಂಖಲೆ ಗುರುತಳಿದಿಲ್ಲೆಂದೊ,
ಸಟೆಯಿಲ್ಲದೆ ಹಿಮ್ಮಡಿ ಬಿಡದೆಂದೊ.
ಕಟು ವಕ್ರವೆ ಭುಜ ಹಿಡಿದಿಹುದೆಂದೊ
ಸೆಟೆಗೊಳ್ಳುತ ಕೊರೆವಳು ಮಾತೆ !

೧೧

ನವರತ್ನದ ಗಣಿ ತೊಡವೆಂದು
ಸುವರ್ಣ ನಿಧಿ ಉಟ್ಟವಳೆಂದು
ನವ ವನ ಸುಮ ಶೃಂಗಾರಿಣಿಯೆಂದು
ಭುವ ಭುವನವೆ ಸ್ತುತಿಸಿಹುದೆಂದೂ.

೧೨

ಶೃಂಗಾರಕೆ ಆಭರಣವ ತಂದು
ಮಂಗಳೆಯುಡೆ ಸ್ವರ್ಣಾಂಬರ ತಂದು
ರಂಗಿನ ರಂಗಿನ ಸುಮ ಸುರಭಿಯ ತಂ-
ದಂಗನೆಯರ ರಾಣಿಯನಿಂದು

೧೩

ಎಂತಿಹಳಂತೆಯೆ ಶೃಂಗರಿಸಿ,
ಅಂತಂತೆಯೆ ಚಿಂತೆಯ ಮರೆಸಿ,
ಸರತಸ ಮೃದುಲವ ಮೊಲನೆಯೆ ಹರಿಸಿ
ಭ್ರಾಂತಿಯು ಮಿಗೆ ತಲೆ ಅಡಿಗಿರಿಸಿ.

# ನೀವಲ್ಲವೇ ಆಕೆ?

## ಭಾಗ ೧

ಮನೆಯೊಂದು ಹಳೆಯ ದೇಗುಲ. ಮಂದಿ ಇಹುದೆಲ್ಲ
ಒಲೆ ಮುಂದೆ ಚಿಂತಿಸುತ ಕುಳಿತ ಒಂದೊಡಬಾಳು.
ಶಿಲೆಯ ಪ್ರತಿಮೆಯೆ ಸವೆದು ಕಂಗೆಟ್ಟು ಕುಳಿತಿಹುದೊ
ಎನುವ ಪರಿ. ಒಲೆಯ ಉರಿ ಅವದವಿದು ಹೋಗುತಿದೆ.
ಗಮನವಿಲ್ಲದೆ ಎಡದ ಅಂಗೈಲಿ ತಲೆಯ ಭಾ-
ರವನಿಕ್ಕಿ, ಹಣೆಯ ಸುರುಟಿಸಿ, ಮತ್ತೆ ನಿಡು ಸುಯ್ದು
ಅತ್ತ ಆರುವ ಒಲೆಯ ನೋಡಿ ಕಣ್ಣೀರಿಡುತ
ಅಂತೆ ಕಿಡು ದೆಸೆಗಿಳಿದ ನೆರಳಿನೊಲೆ ಅರೆ ಚಲಿಸಿ
ಒಲೆಯನೂದುತ ಎರಡು ತೊಡೆ ನಡುವೆ ಕೆಮ್ಮುತ್ತ
ಅಂತೆ ನೆಲಕೊತ್ತಿ ಆ ಬೇನೆ ಮೊಗವನು ಇಹದ
ಕಾರ್ಪಣ್ಯವೆಲ್ಲವನು ಅಳೆದುಕೊಳ್ಳುದು ಸುತ್ತ
ಎರಚಾಡಿದೆಲ್ಲ ಪುಸ್ತಕ – ಭವದ ಸಾಮುಗ್ರಿ
ಎಡಗಡೆಯ ಕಿಟಿಕಿಯಿಂದೈತಂದ ತಿಂಗಳಿನ
ಬೆಳಕಿನಲಿ ಅಸ್ಪಷ್ಟ ಕಾಣುತಿವೆ ಸುಡುಗಾಡ
ನೋಡಿಕೊಳ್ಳದ ಅವ್ಯವಸ್ಥೆಯಲಿ ಆ ನಡುವೆ
ಅಂತು ಅವನತವಾದ ಆ ಬಾಳೊ ಕಾಣುತಿದೆ
ವಿಧಿಯೊಂದು ನಿಸ್ಪೃಹಕೆ ಮಣಿದೊಂದು ವಿಕಟದೊಲೆ.

ಮತ್ತಂತೆ ಎದ್ದು ಕುಳಿತದೊ ಸುತ್ತ ದಿಟ್ಟಿಸುತ
ನೆನೆಯುವುದು ಅದರ ಹಿಂದಿನ ಸುಖವ, ಇಂದಿನತಿ
ನಿಷ್ಠುರವ. ಪೈಶಾಚ ಅಟ್ಟಹಾಸದಿ ನಗುತ
" ಎಲ್ಲ ಬರಿ ಕನಸಾಯ್ತು " ಎಂದು ತಲೆದೂಗುವುದು.
ಮತ್ತೆ ಚಿಂತನದಲ್ಲಿ ಬರಿ ಮುಗ್ಧವಾಗುವುದು.

ಹತ್ತು ವರ್ಷದ ಹಿಂದೆ ಎಲ್ಲ ಇದ್ದಿತು ಅದಕೆ;
ಮುತ್ತು ಮುತ್ತೈದೆ ಹೆಂಡತಿ, ರನ್ನ ಕುವರ – ಕುವ-

ಮಲ್ಲಿ. ಅವಳನುವಾಗಿ ಹತ್ತ – ಹೊತ್ತವರೈದು
ಮಂದಿ – ಅವಳಾಸೆ ಮಿಗೆ ಹೆಸರಿಸಿದ ಹೆಸರುಗಳು :
ಬಸವ, ಅಲ್ಲಮ, ಚೆನ್ನ, ಶಾಂತಿ, ಮುದ್ದಿನಮಲ್ಲಿ.
ಸುತ್ತೈದು ಕರುಗಳೆಡೆ ಕಾಮಧೇನುವೆ ಮಲ್ಲಿ.
ಮದುವೆಯಾದಳು, ಎಲ್ಲ ಸೌಭಾಗ್ಯ ತಂದಳು.

ಲಾಲಬಾಗಿನಲವರ ಬೆಟ್ಟಿಯಾದುದು ಮೊದಲು.
ಕಲ್ಯಾಣ ನಿಶ್ಚಯವೊ ವರನ ವರ್ತೂರಿನಲಿ.
ಬೆಂಗಳೂರಿನ ಹೆಣ್ಣು – ಭ್ರಾಂತು ವರ್ತೂರಿಗದು.
ವಧುವರರ ಕರೆತಂದ ದಿನ ಊರ ಹಿರಿ ಹಬ್ಬ.

ಮಲಕು ಮುತ್ತಿಟ್ಟ ಮಾಟದ ಹಣೆಯ ನಯಗಾತಿ
ಮಾಲೂರ ಮಲ್ಲಿ ನಾಣ್ ನಾಣ್ ಒತ್ತಿ ವರ್ತೂರ
ಸಂಗಮಲ್ಲನ ಪಡೆದ ಕೈಗಳನು ಝುಮ್ಮೆನಲು
ಅರುಮೆ ಬಳಲಿಸಿದದಿರು ಕೈಗಳಲಿ ಹಿಡಿದಂದು
ಊರೂರೆ ಕೇರಿ ಕೇರಿಯೆ ಮುಗ್ಧವಾದೊಂದು
ನೆನಸಿನಿದು, ವರ್ತೂರ ಕಿವಿಗಳಲಿ ಹಾಡಿತ್ತು.
ಪುಟ್ಟಿಸಿದ್ದನೊ ಮರುಳು – ಉತ್ಸುಕಕೆ ಹುರುಡುಗೊಂ-
ಡೂರ ಮೆರೆವಣಿಗೆಯನು ಗೈಸಿದಂದಿನ ನೆನಸು
ಮನಸೊಂದು ಸವಿಗನಸು. ಊರ ಬಿದ್ದಣವಾಯ್ತು;
ಊರೂರೆ ಬಾಯಿ ಬಾಯ್ ಚಪ್ಪರಿಸಿ – “ ವರ್ತೂರು
ಕಂಡಿತಿಲ್ಲೆಂದು ಈ ಬಿದ್ದಣದ ಭೋಗವನು.
ಸಂಗಮಲ್ಲನೆ ಧನ್ಯ ! ಮಲ್ಲಿ ಊರ್ವಶಿ ! ” ಎಂದು
ಸೇರಿ-ಸೋಮಾರಿ ಸಭೆ ಸಭೆ ಕೊಂಡು ಕೊನೆದಿತ್ತು.

ಹತ್ತು ವರ್ಷದ ಹಿಂದೆ ! ಸ್ಮೃತಿ ದೀಪ್ತವಾಯಿತ್ತು !
ಮುತ್ತು ಸಂಸಾರ ನಗೆಗಳ ಗೊಂಚಲಾಗಿತ್ತು !
ಸಂಭ್ರಮದ ಚಿಗುರಿಗಣ್ ಚೆಲುವೆಯೊಬ್ಬಳು ಗೃಹಿಣಿ
ಜಳ ಜಳನೆ ಬೆಳಗಳಾಡಿಸಿಕೊಂಡು, ಸರಿಗೈದು
ಪುಸ್ತಕಗಳ್, ಇಲಿ, ಜಾಡ, ಕ್ರಿಮಿ – ಕೀಟ

ಕೊಂಡು ಪೋಲುಭವ, ಗೃಹಕೃತ್ಯ ನಿರ್ವಹಿಸುವಳು
ಬಾಗಿ ತೂಗಿ! ವಿಚಿತ್ರ ಗಾದಿ ತುಂಬುವುದವಳ
ಪಾಡು ಸಡಗರದಲೇ ಮನೆಯು ತುಂಬಕಕ್ಕು! ಆ
ಸ್ವರ್ಗದ ವಿದೂಷಕರು ಕೊಂಜು ಪುರುಳಿಗಳೆಳೆಯುರ್
ಕೈಕಾಲ್ಗೆ ತೊಡರಿ ತೊಡೆವಿಡಿದೇರಿ ಕಾಡುವರು.
ಮನೆಯೆಲ್ಲ ಸೆಲೆಗೊಡುವುದವರ ಕೇಕೆಗಳಿಂದ!
ಅಕ್ಕರದ ತಾಯ್ತುಂದೆ ನೆಂಟರಿಷ್ಟರೊ ನೆರೆದು
ಸೊಗವ ತಾವ್ ಜಾತ್ರೆಗೈಸುವರು! ದಿವಿ ಹರಸುವುದು
ವರ್ತೂರಿಗೆಲ್ಲ ಮಾದರಿಯೆನಿಸಿದಾ ಅಣಿಯ
ಮುದ್ದು ಸಂಸಾರವನು! ಹತ್ತು ವರ್ಷದ ಹಿಂದೆ!
ಮಲ್ಲಿಯನು ಎಡಬಿಡದೆ ಒಡಗೂಡಿ ಆಡಿದಾ
ಹೊಸದು ಜವ್ವನದ ಚೆಲ್ಲಿನ ದಿನಗಳವೊ ಭವದ
ಭಾಗ್ಯ! ಗೆಡೆವಕ್ಕಿಗಳ ಮೀರಿ ಮಚ್ಚಿರ್ದರವರ್!
ಮಲ್ಲಿ ಮಲ್ಲನ ಹಿಗ್ಗು, ಮಲ್ಲ ಮಲ್ಲಿಯು ಹಿಗ್ಗು!
ತೋಟ ಕೆಲಸಗಳಲ್ಲಿ ನೆರವು, ಮನೆಗೆಲಸದಲಿ
ಜೀವಕೆ ನೆರವು, ಮೆಲ್ಪಾಸಿನಲಿ ಅಸುಗೆಗೆಡೆ,
ಊಟ ಉಪಚಾರದಲಿ ತಾಯ ಮರೆಸುವಳವಳು,
ಹಿತವ ಕೋರುವ ಎಡೆಯೊ ಕಣ್ಗೆ ಕಣ್! ಮಲ್ಲಿ ಮಲ್ಲಿ!
ಇದಿರಾಗಳನುಸರಿಸಿ ನಡೆಯುವಳು ಮನ್ನಿಸುವ-
ಳೇನಾದರೂ ಮತ್ತೆ ಎಂತಾದರೂ ಮೊಲ್ಲೆ
ವೂವೆದೆಯ ಮಲ್ಲಿ! ಇನ್ನೆಲ್ಲಿ ಸರಿ ಮಲ್ಲಿಗೆಲ್ಲಿ!?
ಹೊಸ್ತಿಲಲಿ ಸುಳಿಯುವಳು ಸ್ವರ್ಗದಲಿ ಶಶಿಯಂತೆ!
ಹಚ್ಚ ಹಸುರಿನ ಹೊಲದಿ ಬಹಳು ಮೋಹಿನಿಯಂತೆ!
ತೋಟದಲಿ ವನದೇವಿಯಂತೆ! ಕತ್ತಲ ಮನೆಯ
ಕೋಣೆ ಅಂಗಳಗಳಲಿ ಒಲವಾಳ್ವ ಗೃಹದಂತೆ!
ಆದ ಕೂಸುಗಳೈದು — ಗಂಡು ಮೂರೆರಡು ಹೆಣ್,
ಮಂದಾರ ಕುಸುಮಗಳು ಮಂದಾರ ಮಲ್ಲಿಯವು!

ಬಳೆಡುವವು ಮಂದರದ ಗಿರಿಯ ಶಿಖರಗಳಂತೆ-
ಮುದ್ದು ಮಾಯೆಯ ಮಾಟಗಳನೆಲ್ಲ ತೋರುತ್ತ !
ಪ್ರೇಮ ವರ್ಧಿಸಿತು, ಸುಖ ಹೆಚ್ಚಾಯ್ತು, ಸುಮ್ಮಾನ
ಮನವ ಮಿಕ್ಕಿತು ! ಗೆಡೆ ಮತ್ತಷ್ಟು ನಿಕಟವಾಯ್ತು !
ಮರುಳು ಮೋಹಕೊ ಮಾದಕವೊ ಮೀರಿಹೋಯ್ತು !
ತರುವಾಯ, ಮರು ನಿಮಿಷ ಏನಿಲ್ಲ, ಎಲ್ಲ ಹಾಳು.
ಕಣ್ಣೀರ ಕಣಿವೆಯೆನೆ ಮಿಕ್ಕು ಹೋದೊಂದು ಗೋಳು.
ಚಲಚಿತ್ರ ವಿಭವವೆಲ್ಲವು ಉರಿದುಹೋದತ್ತು
ಒಂದಾದಮೇಲೊಂದು, ಭ್ರಾಂತಿಲೋಭಗಳೆಲ್ಲ.
ನಿಡುಸುಯ್ದ್ ನಿರಾಶೆ ತಿದಿಯೊತ್ತುವುವು ಜೀವಿತದ
ಹಾಳಿನಾ ಕುಲುಮೆಯಲಿ. ಸಂಭ್ರಮವದಾವುದೂ
ಸುಮ್ಮಾನವಾವುದೂ, ಅಕ್ಕರೆಯದಾವುದೂ,
ಇಲ್ಲ. ಒಡಬಾಳೊಂದು ಶೂನ್ಯ ಗೃಹ ಪ್ರಾಂತದಲಿ
ವಿಧಿಯಾಜ್ಞೆಗೆಂದೆನಲು ಏಕಾಕಿ ತೊಳಲುವುದು
ಚಟವಿಡಿದ ಪ್ರೇತವೆಂದೆನಿಸಿ ತಾ, ಬಳಲುವುದು.
ಮತ್ತೆ ಚೈತನ್ಯಗೂಡಿಸುವೊಂದು ಸುಖವಿಲ್ಲ,
ಗೆಡೆಯಿಲ್ಲ, ಬೆಳಕಿಲ್ಲ, ಎತ್ತಲೆತ್ತಲು ಶೂನ್ಯ.
ಜೀವನಕೆ ಜೀವವಿಲ್ಲದೆ ದುಡಿವ ಪರಿಯಾಯ್ತು.
ನರಕದಲಿ ಬಾಳುವೆಯು ಸೈಪಿಡುವ ಪರಿಯಾಯ್ತು.

ಎಂತಾದರೇನು, ಏನಾದರೇನ್ ? ಇರುವನಕ
ಬಾಳುವೆಗೆ ಭಂಗ ತಪ್ಪದು. ಹತ್ತು ವರ್ಷವಾಯ್ತು,
ಮರುಳೊಂದು ಮೃಗವೊಂದು ಕ್ಷಣ ಕ್ಷಣವು
ತುಡಿದುಹೋಯ್ತು.
ಕೆದರಿಹುದು, ಸಿಕ್ಕಟಿಕೆ ಸೋಕಿಲ್ಲ, ಕಂಡಿಲ್ಲ
ತೈಲವನು ಆ ಹತ್ತು ವರ್ಷ ತಲೆಯು ಕೂದಲು.
ಬೆಳೆದ ದಾಡಿಯೊ ಪೊದರುಗಟ್ಟಿಹುದು. ಹೊಕ್ಕಿಹುದು
ರಿಯುರು. ತನ್ನವಳ ಹೆಸರಿನಿದಾದ ಮಾಲೂರ

ಕಣ್ ತನ್ನ ಗೂಡಿನಲಿ ತಾ ಇಳಿದು. ಕಚ್ಚಿಹುದು
ಕೆನ್ನೆ ದಾಡೆಗೆ ಒತ್ತಿ. ಬಿಡಿ ಬಿಡಿಸಿ ಕಾಣುತಿದೆ
ಪಕ್ಕೆಲಬು, ಕೈಕಾಲು ಬರಿ ಮೂಳೆ ಮೂಳೆ. ಸುಂ-
ಡಿಹುದೊಡಲ್, ಬೆನ್ ಮೂಳೆ ಬಾಗಿಹುದು. ಬರಿದೊಂದು
ಅಸ್ಥಿಪಂಜರಕೆ ತೆಳು ಬಟ್ಟೆ ಸುತ್ತಿದ ರೀತಿ.
ಹಾಗೆಯೇ ಚಾಚಿ ಸಿಗುರೆದ್ದ ಕಟ್ಟಿಗೆಯಂಥ
ಬಲದ ಕೈಯೆಡೆಯ ಸಾಮಗ್ರಿಗಳ ತಡವರಿಸಿ
ಬೀಡಿಯೊಂದನು ಕೊಂಡು ಮುನ್ ತೆವಳಿ ಒಲೆ ಕಡೆಗೆ
ಬೀಡಿ ಹೊತ್ತಿಸಿಕೊಂಡು ತರಗೆದ್ದ ತುಟಿಗೆತ್ತಿ,
ಸೇದಿ,-ಕತ್ತೆತ್ತಿ ಮೇಲಕೆ ಹೊಗೆಯನೂದುವುದು,
ಗರುಡ ಮೂಗಿನಲುಸುರು ಕಟ್ಟಿ ನಿಶ್ವಸಿಸುವುದು.
ಬಗೆಗೆ ಬೇಸರವಾಗೆ ಅಂತೆ ಒಲೆಗೆಸೆಯುವುದು
ಬೀಡಿಯನು. ಮೆಲನೆ ಮೇಲನೇಳುವುದು ಆ ಪಿಶಾ-
ಚಾಕೃತಿಯೊ ತನ್ನ ಎತ್ತರ ತಾನ್-ಕುಂಟುತ್ತ
ಜೌಗು ಹಿಡಿದಂತೆ ಸೊಡರಿಟ್ಟ ಕಂಬದ ಕಡೆಗೆ
ನಡೆದು ಸೊಡರನು ಕೊಂಡು ಯಂತ್ರ ವಿಗ್ರಹದಂತೆ
"ಭ್ರಾಂತು!" ಎಂದೆಂದುಕೊಂಡಡಿಗೆ ಮನೆಯಾಚೆ ಕಡೆ
ನಿಶಿಯ ಹಿಂದಿಟ್ಟುಕೊಂಡಂತಂತೆ ನಡೆಯುವುದು.
ನಡೆದು ಎಡೆಯಲೆಯಿದ್ದ ಹಾಳು ಬಿದ್ದಂತಿದ್ದ
ಪೂಜೆ ಮಾಡುವ ಮನೆಗೆ ಚದುರೇಳಿಸೋಡಿಸುತ
ನೇಲ್ದ ಬಾವುಲಿಗಳನು, ಸೊಡರಿಕ್ಕಿ ಕೈಮುಗಿದು
ಕಸದ ರಾಜ್ಯವನಾಳಿದೀಶನಿಗೆ ಎರಗೆರಗಿ
ಸೊಡರ ಕೈಯಲಿ ಮತ್ತೆ ಕೊಂಡು ಹೊರಗೈದುವುದು.
ಮತ್ತೆ ಕಿರುವನೆಯೊಂದಕ್ಕೈದಿ ನಿಲುವುದು ಅಂತೆ
ಅವ್ಯವಸ್ಥೆಯ ನಿರುಕಿಸುತ್ತ ಸಂತಾಪದಲಿ.
ಒಪ್ಪವಿಡುವರೆ ಅಣೆಯು ನಚ್ಚಿನವಳಿಲ್ಲ. ಇನ್
ಕುಪ್ಪೆ ಎರಚಾಡಿಹುದು – ವಸ್ತ್ರ, ವಸ್ತು, ಪದಾರ್ಥ.

ಕುತ್ತು—ಹರಿದಾಡಿ ಹೆಮ್ಮಿ ಸೈಪರಾತನನೆ
ಹುಚ್ಚನಾಗಿಸುತಿದ್ದು, ವಾಟೀನೆ ಬಾಳ್ ನಿಮಿಷ
ತಳುವಿ ಜೀವದ ಮರಳ ಅಳಿದುಕೊಳುತಿತ್ತು, ಇಹ
ಲೋಕ ಸಹಿಸುವುದಕಿಂತಾಳವಾಗಿತ್ತು.
ಕಂಡತ್ತಲಾ ಕಣ್ಣು ಕೋಟಲೆಯ ವಿಸ್ತಾರದಲಿ
ಹಚ್ಚ ಸೀರೆಯನೊಂದ ಹುಚ್ಚು ಹಿಡಿದತ್ತೊಮ್ಮೆ.
ಸೊಕ್ಕಿ ಅಳಲಿಗೆ ಮೂರ್ಛೆವೋದತ್ತು. ಮರವರಿತು
ನಡೆ ಹೊರಳಿದತ್ತು ಅಘುಶೇಷವದರೆಡೆಗಂತೆ.
ಮತ್ತೆ ಅದ ಹಿಡಿದು ಕಪಿಮುಷ್ಟಿಯುಲಿ ಹಂಬಲಿಸಿ
"ಮಲ್ಲಿ! ಮಲ್ಲೀ! ಎನ್ನ ಸುಯ್ಯೊರಲಲೆದೆಯಲದ
ಒತ್ತಿ ತಾಳ್ದತ್ತು. ಬಾಳ್ ಹೊತ್ತಿ ಹಾಳುರಿದತ್ತು.
ಒಡನಂತೆ ಬಡವೆದ್ದು ಜಡದೇಹವಿಡಿದೊತ್ತಿ
ನಡೆದಂತೆ ಪೆರಗೈದಿ ಮನೆಯ ಒಂದೆಡೆ ಬಿದ್ದ
ತುಕ್ಕು ಬೀಗವ ಕೊಂಡು ಇರದೈದಿ—ಪೆರಗೈದಿ
ಹೊರಬಾಗಿಲೆಳೆದುಕೊಂಡಾಚೆ ಬೀಗವಹಾಕಿ
ಬೀಸಾಡಿ ಅತ್ತ ಬೀಗದ ಕೈಯನೆತ್ತಲೋ,
ಹಲ್ಲಿ ಲೊಚಗುಟ್ಟುತಿರೆ—ಗಾಳಿ ಹೊಯ್ದಾಡುತಿರೆ,
ತಿಂಗಳಿನ ರಾತ್ರಿಯುಲಿ ಐಲೈಲು ನಡೆಯುವುದು.

## ಭಾಗ ೨

ಲಾಲಬಾಗ್! ಜವ್ವನಿಗರಮರವನ! ಮದನಬಾಗ್!
ಸುಂದರದ ಕಲೆ ಬೆರೆತ ಪ್ರಕೃತಿ ದೇವತೆಯ ಬಾಗ್!
ಶೀತಲ ಲತಾಗೃಹಗಳತಿಸುಖದ ವಿಟಪಿಗಳು!
ಕೃತಕಸರ, ಉದ್ಯಾನ ಭವನ, ಸೋಪಾನಗಳು!
ಕೃತಕ ಶೈಲಗಳೊಪ್ಪವಿಟ್ಟ ಆಡುವ ಬೈಲು!
ತೀವಿದಚ್ಚರಸಿಯರ ಉದ್ಯಾನವೆನಿಪ ಬಾಗ್!

ಎಷ್ಟೆಷ್ಟೊ ಪ್ರಣಯ ವೃತ್ತಾಂತಗಳ ನಾಕ ನೆಲೆ!
ಎಷ್ಟೆಷ್ಟೊ ವಿಪ್ರಲಾಪಗಳೊಂದು ಸೈಪುಸೆಲೆ!
ಮುಪ್ಪಲ್ಲಿ ಎಳವೆಯಹುದೆಳವೆ ಜವ್ವನವಹುದು!
ಉತ್ಸಾಹಿ ಜನಗಳಿಗೆ ಮಾರಮಂತ್ರಣವಹುದು!
ಮದನ ಮಾದಕ ಸುಧೆಯನೀಂಟಿದೊಲಿ ಮರೆಯುವರು
ಜೀವಿತದ ಕಷ್ಟನಿಷ್ಠೂರಗಳ ಲಾಲಬಾಗ್
ಬಾಗಿಲೆಡೆಗೈದುತಲಿ ಆವೆಂಥಮಾನಿಸರು!
ಹೊಸ ವೇಷ ಹಾಕುವರು ಹಳತಮರೆತವರಂತೆ!
ನಗೆ ನಗೆ— ವಿಲಕ್ಷಣ ನಿರೀಕ್ಷೆ, ಒಯ್ಯಾರಗಳು,
ಗತಿಯು ಗಾಡಿಗಳು ಜಾತ್ಯಭಿಮಾನವೊಂದಿರದೆ
ಸ್ತ್ರೀಪುರುಷರಿಬ್ಬರಲು ನಯವಾಗಿ ನೆರೆಯುವುವು!
ವ್ಯಂಗ್ಯ ಉಲ್ಲಾಸಗಳು ಸಂಭಾವ್ಯವಾಗುವುವು
ಆ ದಿವ್ಯ ಪ್ರಾಂತದಲಿ! ಬಾಳ್ಸುಖವೊ ಹೆಚ್ಚುವುದು!
ಬಾಳ್ ಮದಕೆ ಸೊಕ್ಕಾಗಿ ವಿಹರಿಪುದು ತುಳುಬಳುಕಿ!
ಅದರ ಮೂಡಣ ದೆಸೆಯಲಿಹುದೊಂದು ಕಿರುವೆಟ್ಟ.
ಮೂಡುವುದು ಬೇನೆಮಾನಿಸನ ಮೈಸೊರಗಿ ಹೋ—
ದೊಂದು ಶೀರ್ಣವಿಕಾರ ಅದರಡಿಯೆ ತಳಿರತರು
ಛಾಯೆಯಲಿ ಅಂತೆಯೇ ಸೇದೆವಡುತಾಯಸಕೆ
ಕದಲುವುದು ಮೆಲಮೆಲನೆ ನಡೆದು ಮೆಲಮೆಲನಂತೆ
ಕಿರುವೆಟ್ಟದೆಡೆಗೆ ನಿತ್ರಾಣವೆನೆ ಕುಸಿಯುವುದು
ಜೋಲು ಬಾಯ್, ಕೆದರು ತಲೆ, ಗುಳಿಗಣ್, ಮುದುರ್ದ ಮೈ
ನೆಲಕೆ ಮೈ ಭಾರವನು ಕೈಯೊಂದರಲಿ ಊರಿ
ಉಷೆಯವಳೆ ಸುರೆ ಹೀರಿ ಹಿಂಡಿ ಬಿಸುಟೊಬ್ಬನೀ
ಇರುಳಲೆಗನೆನಿಸಿ ಅದೊ ಕುಳಿತುಕೊಳುವುದು. ಅತ್ತ
ಕರ್ಕಶದ ಆ ನೋಟ ಹತ್ತುವರ್ಷದ ಬೇಗೆ
ಬೇಯ್ಸಿ ನಲವತ್ತು ವರ್ಷಕೆ ಬಾಳ ಇರುಳಿನಲಿ
ಹೊಸಕಿ ಹೋದೊಡಬಾಳತೆರದಿ ನಿರುಕಿಸುತಿಹುದು

ಜವನೊಂದು ಕರುಣೆಯನು ! ಇತ್ತ ಸುಮಜೀವನವೊ
ಎಂದೆಂದು ನಲುಗಿಸುವ ಆವೊಂದು ನಿಷ್ಠುರವು
ಬಳಿಸಾರಸಲ್ಲ ಎಂದೆನಿಸಿ ಜವ್ವನ ಮೆರೆಸಿ
ಉಷೆಯು ಮಧುವನು ಹೀರಿ ಲೀಲೆ ಮಿಗೆ ನಲಿಯುತಿದೆ !
ಪಟ್ಟಣದ ಹೆಣಗು – ಗಲಗಿನ ಆಚೆ, ಮೃದುವಾದ
ಶಾಂತಿಸುಖಗಳ ಮೋಹಪ್ರಾಂತದಲಿ, ಪ್ರಕೃತಿವೇಣ್
ಮಧುಮಾಸ ಸಿಂಗರದಿ ಉದ್ದೀಪ್ತದಿವದೆಡೆಗೆ
ಪೂರ್ಣ ಹಾಸವ ಬೀರಿ, ಶಕುನ ಸಂಕುಲವೆನಿಪ
ಬಣ್ಣ ಬಣ್ಣದ ಮೆರಗು ಗೆಜ್ಜೆಗಳ ಘುಲಿರೆನಿಸಿ,
ಮಧಪಗಳ ಶ್ರುತಿಗೊಲಿದು ಮೆರೆಸುವಳು ಮೆರೆಸುವಳು
ಪುಷ್ಪ ವಿಕ್ಷೇಪ ನರ್ತನವ ! ಮೇಖಲೆಯು ಶಬ್ದವದು
ಕೋಗಿಲೆಯು ನುಣ್‌ಸರವೆ ! ಬಳಿ ಸರಗಳುಜ್ಜಾಟ
ಕರೆವ ಶುಕ ಸಾರಿಕೆಗಳುಲಿ ಮೊಳಗು !
ನರ್ತಿಪಳ ನಳನಳಿಪ ಎಳದಳಿರ ಪದೆದೆಡೆಯೆ ಅಣಕಿಸುವ
ವಿಷಮ ಪೈಶಾಚ ವಿಕೃತಿ ದಿವವ ಹಿಂಸಿಸಲು
ನೆಣವ ಕಚ್ಚಾಡಿ, ವಿಚ್ಛೇದ ವಿತ್ತುರ್ವರೆಯ
ಮೃದು ಮಧುರ ಸರಣಿಯಲಿ ! ವ್ಯರ್ಥ ಕಂಡಿತು ಎಲ್ಲ !
ಮಾಯೆ ವಿಪರೀತ ಭಾವಗಳ ತಾಳಿಕೆಯಿಂದ
ಪರಿಹರಿಸಲಾಗದೊಂದೊಗಟೆಯನು ಸೂಚಿಸಿತು !
ಅಂತೆಲ್ಲಕಿದಿರು ಬರು ಬರುತಿಹರು ಬರುತಿಹರು
ವನದ ಹಾದಿಯಲಿನಿದು ಕನಸ ನೇಹಗಳಂತೆ
ತಾಯ್, ಮಕ್ಕಳೈವರೊಂದಾಗಿ ಆಡಾಡುತಲಿ.
ತಾಯ್ ಹಚ್ಚ ಸೀರೆಯುವಳೆಳೆಯರಿಬ್ಬರೊ ರೋಜ
ಲಂಗ, ಮೂವರು ಬಿಳಿಯ ಫ್ರಾಕು ನೀಲಿಯ ಚೆಡ್ಡಿ
ತೊಟ್ಟವರು ! ಉಲ್ಲಸವ ಮೆರೆದರಾ ಅರುವರೂ !
ವಿಧಿಯು, ಕರ್ಕಶ ವಿಧಿಯ ಹಾಳು ಬಾಳದನೆಲ್ಲ
ಈರ್ಷೆ ಮಿಗೆ ನೋಡುವುದು, ಅವರೆ ತನ್ನಯ ಹಾಳ್ಗೆ

ನೆರೆದರೆಂದೆನುತ ಕೋಪಿಸಿದಂತೆ ! ಸಟ್ಟುಗ್ರ
ಶೀರ್ಣ ಚಕ್ಷುಗಳಿಂದ ತುಳುಕುವುದು ಹನಿಯೆರಡು !
ಲೀಲೆಯೂ ತಾಯ್ಮಕ್ಕಳರಿವ ಮುನ್ನವೆ ಅಸುಖಿ
ವ್ಯಕ್ತಿ ತರಹರಿಸೆದ್ದು ಎಡೆಗೈದಿ ಕೊಂಕೆತ್ತಿ
ಕೊರಳ ಕಂಬನಿ ಕಣ್ಣ ಹಿಣುಕಿ ದಿಟ್ಟಿಸುತಂತೆ
ತೊದಲು ಗದ್ಗದದಿಂದ "ನೀವಲ್ಲವೇ ಆಕೆ?"
ಎಂದೆನುತ ಕೇಳುವುದು ಬೆಚ್ಚಿ ನಿಟ್ಟಿಸಿ ಕಂಡು
ಅಂತು ಚಂಡಿಸಿ ಕೇಳ್ದ ವಿಕಟ ಕರ್ಕಶವದನು
ಭಯಕೆ ಚೀರುವ ಎದೆಯು "ಉಹು" ಎಂದು, "ಉಹು" ಎಂದು
ಎಳೆಯುರನು ಕಟ್ಟಿಕೊಂಡೋಡುವಳು ಓಡುವಳು,
ಚೀರ್ವೆಳೆಯುರಾರ್ವ ತಾಯ್ ಜೀವಭಯಕೋಡುವರು.
ಎದೆ ಬಿದ್ದ ಆ ಕೃಪಣ ವ್ಯಕ್ತಿ ಮುಕ್ಕುತ ಬಿಕ್ಕಿ
ಅಳುತ, "ನೀವಲ್ಲ ಹೋಲುವೆಯಷ್ಟೆ. ನೀವಾಗೆ
ಎದೆಯೊಡೆದ ಎನ್ನನಿಂತಳುಕಿ ಉಳಿದೈದುವಿರ ?"
ಎಂದು ಒರಲುತ ತನ್ನ ರೂಹಳಿದ ಅಂಗಗಳ
ಹೇಸಿ ದಿಟ್ಟಿಸಿಕೊಂಡು ಅದುರಿ ಮತ್ತದುರಿ ತಾ
ದಾರುಣದ ದುಗುಡದಲಿ ತೂರಾಡಿಕೊಂಡತ್ತ
ಕಿರುವೆಟ್ಟದತ್ತ, ನಡೆ ನಡೆದು ಆ ಏಕಾಂತ
ಶಿಲೆಯ ವಿಸ್ತರದಮೇಲೊಂದು ಹಾಳೆದೆಯೊಡೆದ
ದುರ್ದೆಸೆಯ ಕೀಟದಂತಿಳಿದು ಕುಸಿದುದ್ದಕ್ಕು
ಚಾಚಿ ಮೈ ಚಾಚಿ ಕೈಕಾಲ್ ಅತ್ತ ಇತ್ತ ಮೊಗ
ವಾಡ ಮುಲಗುಬ್ಬಸಕೆ ಕೆಮ್ಮಿ ಬಾಯ್ಬಿಡುತಿತ್ತು.
ನಿಮಿಷ ಕಳೆಯಿತು, ಘಳಿಗೆ ಕಳೆದುಹೋಯಿತು, ಬಂದು
ಬಂದು ವಿಹರಿಪ ಸೊಗಸುಗಾರರೆಲ್ಲರುನಿಂದು
ರೋಗವೆನುವರು ಕೆಲರ್, ಮರುಳನೆನುವರು ಕೆಲರ್,
ಹಸಿವೆಯೆನುವರು ಕೆಲರ್, ತಿರುಕನೆನುವರು ಕೆಲರ್,

ಏನೊಂದನೂ ನುಡಿಯದಂತೆ ಕಲ್ ಕಚ್ಚಿ ಕಡು
ಪಾಪಿ ಮಲಗಿತ್ತು ಜವನೊಡನೆ ನಿಜ ವೃತ್ತಾಂತ
ಸೂಳು ಸೂಳೊಪ್ಪಿಸುತ; ಭುವಿಯೆಲ್ಲ ಮರುಕಕೂ
ಮರು ಮಾತುಗುಡದಂತೆ ಜಡವಾಗಿ ಮಲಗಿತ್ತು;
ಸೊಗದೊಂದು ದೇಸೆಯುಲಿ ಜವನೊಂದು ಕುತ್ತವಿತ್ತು.

# ಕಾವೇರಿಗೆ

ನಿನ್ನಲಿಸಿಸೇಕಾಂತವೆನಗೆ ಓ ಕಾವೇರಿ.
   ಎನ್ನ ಭಾವದ ಮಧುರ ನಿನ್ನಲಿನಿಸಿಹುದೆ.
ನಿನ್ನ ಸುಂದರದ ತೀರದ ನೆನಸನಿತ್ತಾತೆ
   ಎನ್ನನುಳಿದ್ಯೆದಿಹಳು, ಕಂಡು ನೆನಸಹುದೆ.

ಚಕ್ರಾಧಿಪತ್ಯಗಳ ಉದಯ-ವಿಭವ-ವಿಲುಪ್ತಿ
   ಪಾವನದ ನಿನ್ನ ತೀರದಲಾಗಿಹೋಯ್ತೆಷ್ಟೊ,
ಚಕ್ರವರ್ತಿನಿ, ಮಹಾರಾಣಿಯರ ಸುಖ-ದುಃಖ,
   ಪಾವನೆಯೆ, ಎರೆದ ಏಕಾಂತವಿನ್ನೆಷ್ಟೊ!

ಅಂದೊ ಆ ಸಂಪನ್ನ ಸೊಬಗೆಯರ ಕಾಲ್ಗೊಲಸು
   ಮಂದ ಗಂಭೀರದಂದಿನ ನಿನ್ನ ವಾಹಿನಿಯ
ಮಂದರದ ಮೊರೆತದಲಿ ಸ್ವರ್ಗ ಕಂಡಿರಬೇಕು,
   ಚಂದದಾ ಜಂಘೆಗಳ ಶ್ರಮವೊ ಕಳೆದಿರಬೇಕು

ಕೊಡಗು ಬೆಡಗಿನ ನಾಡ ಮಲೆಯ ಕಣಿವೆಯಲುದಿಸಿ
   ಎಡೆಯನೆಲಗಳನೆಲ್ಲ ತೂಗುವೆಳ ಹಸುರಿನಲಿ
ತೊಡವುಗೊಳಿಸುವ ಬೆಟ್ಟಕನ್ನೆ! ಅವಿರತ ಸುಖಕೆ
   ಮಡದಿ! ಸಮೃದ್ಧಿಗಳ ತಾಯ್! ಸುಂದರಕ್ಕೆ ಸುಯ್!

ನಿನ್ನ ಹಾಯ್ನನಿತರಲಿ ದಣಿದರಿಗೆ ಸೊದೆಯೆರೆವ,
   ಖಿನ್ನರೆದೆಗಂಜುನವ ನಿಡುವ ತನುವಾಂತೆಲರೊ
ಇನ್ನೆನಿತು ಚೈತನ್ಯಗಳಿಗೆ ಉತ್ಸಾಹವನು
   ಮನ್ನಿಸಿತ್ತುದೊ, ಪ್ರಣಯಶೃಂಗಾರದಾವೋದೆ!

ಅವರ ಉಲ್ಲಸದ ಚಿಣ್ಣರೊ ದೇವಬಾಲರೊಲೆ
ಲವಲವಿಕೆ ಮಿಗೆ ಮರಳು ತೀರದಲೊ, ಸೋಪಾನ
ಪಂಕ್ತಿಯಲೊ, ನೀನುಕ್ಕಿ ಹರಿದು ಆಡಲೆ ಎಸೆದ
ಶಂಕು ಚಿಪ್ಪುಗಳಾಯ್ದು ಆಡಿ ಮರೆತಿರಬೇಕು !

ನಿನ್ನ ಅಚ್ಛೋದಕದ ನೀಲವಾಹಿನಿಯೆದೆಯ
ಚಿನ್ನ ರನ್ನದ ಲಕ್ಷ ದೀಪಗಳ ಪ್ರಭೆಯಿಂದ
ಸನ್ನುತಾಂಗಿಯರು ಬೆಳಗಿದ ಹಬ್ಬ ಹುಣಿವೆಗಳು
ನಿನ್ನ ತೀರದಲಿ ಉನ್ನತವೆ ಮೆರೆದಿರಬೇಕು ;

ಹುಣ್ಣಿವೆಯ ಪ್ರಣಯವನು ಮರುಳುಗೊಳಿಸುವ ರಾತ್ರಿ
ತಣ್ಣನೆಯ ಗಾಳಿಯಲಿ ತೆಪ್ಪಗಳ ಕಟ್ಟಿ ತಾವ್
ಬಿನ್ನಣದ ಪ್ರಣಯಿ — ಪ್ರಣಯಿನಿ ಮುಕ್ತಕಂಠದಲಿ
ನಣ್ಪಿಯಲಿ ಎದೆ ತೆರೆದು ಹುಟ್ಟುಹೊಡೆದಿರಬೇಕು !

ಕಣ್ಣಾದ ನಿನ್ನ ಜೀವನದ ಸುಖ ವಿಸ್ತರದಿ
ನಾಣ್ನುಡಿಗಳೆನಿಸೊ ಸ್ಮೃತಿತಪ್ಪಿ ಹೊರಳಿರಬೇಕು ;
ನಿನ್ನ ಮೀನ್ ಬಳಗವೊ ಎರಚಾಡಿಹೋದ ಸಂ
ಪನ್ನರಾವೋದದಲಿ ಹಬ್ಬ ಕಂಡಿರಬೇಕು ?

ತೀರವನು ಸಿಂಗರಿಪ ಸ್ನಿಗ್ಧ ತರುಗಳ ಛಾಯೆ
ಸಾರ ಸನ್ಮೋಹದೇಕಾಂತದಾಹ್ವಾನಗಳ
ಬಾರಿ ಬಾರಿಗು ಬೆಟ್ಟಗೊಳಿಸುವತ್ಯುತ್ಸುಕದ
ಮಾರನೊಸಗೆಯ ಸಂಚುಗಳ ಪಾಲಿಸಿರಬೇಕು.

ಆದರೊ ಅಭಾಗ್ಯನನು ಅಂತದಾವುತ್ಸುಕವು
ಆದರಿಸದೌ. ನೂರಜುಗಲ್ ತುಂಬಿದೀ ನಿನ್ನ
ಗಾದಿಯೊಂದಕೆ ಬಂದು ಕುಳಿತಿಹೆನು ಏಕಾಕಿ !
ಕಾಡುಹೋಗಿದೆ ಕಲ್ಲು, ಸೋಪಾನದೆಡೆ ಪಾಚಿ !

ಕೋಟೆಯಿಹುದದರ ವೈಭವವೆಲ್ಲ ಹಾಳಾಗಿ !
ತೋಟವಿಹುದದರ ಸಿಂಗರವೆಲ್ಲ ಕಾಳಾಗಿ !
ರಾಜಗೃಹವಿದೆ, ಕಾವಲಾಳ್ಗಳೂ ಅಲ್ಲಿಲ್ಲ !
ರಾಜ ಉದ್ಯಾನವಿದೆ, ಇಲ್ಲ ಅತಿಕ್ರಮಿಪರೂ !

ದೂರದ ಮಶೀದಿಯಿಂದೈತಹುದು ಮೆಲು ಮೊರೆಯೊ,
ದೂರ ಗುಂಬಸ್ಸಿನದೆ ಗಂಧ ಧೂಪದ ಧೂಮ,
ನೀರವದ ರಂಗನಾಥನ ಗರ್ಭಗುಡಿಯಿಂದ
ಬಾರಿ ಬಾರಿಗು ಯಾರೊ ಹೊಡಿವ ಗಂಟೆಯ ಸದ್ದು

ಸಾರುತಿದೆ—" ಇದೆ ಇಹದ ವೈಭವದ ಕಥೆ "ಯೆಂದು !
ಬೇರೊಂದು ಗಲಗು ಕೇಳಿಸದೆತ್ತಲೆತ್ತಲೂ !
ಸಣ್ಣೊಂದು ಕಲ್ಲ ನೀರ್ಗೆಸೆದಂತೆ ಎನ್ನೆದೆಯ
ಖಿನ್ನದಲಿ ಸುರುಳಿ ತೆರೆಗಳೊ ಎದ್ದು ಪ್ರಸರಿಪುವು ,

ಮಣ್ಣುಪಾಲಾದ ಆ ಗತವಿಭವ ಕಥೆಯೆಲ್ಲ
ಎನ್ನಂತರಂಗದಲಿ ಕೆದರಿ ಕಾಡುವುದಲೆದು ,
ಬೀರದಾ ಹುಲಿ ಕೋಟೆಗೋಡೆಯಲಿ ಕೆತ್ತಿಸಿದ
' ಆರು – ದೈವವು ಒಡೆಯರ್ " ಎನ್ಪ ಶಾಸನ ನಿನ್ನ

ನೀರ ಸಾಕ್ಷ್ಯವೆ ಸಿಕ್ಕಿದಂತೊಡೆದು ಮುರುಕಾಗಿ
ಮೂರನೆಯ ದಿನವೆ ವೈಧವ್ಯವಾಂತುತ್ಸವದ
ಸ್ವೈರದತಿ ಅಟ್ಟಹಾಸದವೊಲೇ ನಿಂತಿಹುದು .
ನಿಾರಸಾಧಕರ ಒಳತೋಟಿಗಳನೆನಿತುವನೊ

ಬಾರಿ ಬಾರಿಗು ಆಲಿಸಿಹೆ ನೀನು. ನೆತ್ತರನು,
ವೀರತಾ ಕೊಳೆತು ನಾರುವ ಹೆಣಗಳನಿತುವನು
ಸಾರ ಪಾವನದಲೇ ತೊಳೆದಿರುವೆ, ಒಯ್ದಿರುವೆ.
ಸಾರವತಿ, ನಿನ್ನ ಎದೆ ಅಂದು ಆರತಿಯಾಯ್ತು

ವೀರವಾಂತಳಿದವರ ಸ್ವರ್ಗಕಾಹ್ವಾನಿಸುವ,
ವೀರ ರಮಣಿಯರ ಎದೆ–ರಕ್ತಗಳ ಕಾರಿಸುವ.
ಗುಂಡು ಮದ್ದು ಪಿರಂಗಿ ಹಾರಿದುವು ಅವಿರತವೆ,
ಗುಂಡು ಬಂಡೆಗಳು ಮಡಿವಾಳ್ಗಳೊಡನೊರಲಿದುವು ;

ತಂಡ ತಂಡವೆ ಉರುಳಿತೆಲ್ಲ ; ಪಟುಭಟರುಗಳೊ
ಚಂಡ ಕೂರಸಿಗಳಲಿ ಇರಿದಾಡಿ–ಉರುಳಿದರು.
ಮುತ್ತು ಚಿಪ್ಪುಗಳಾಳ್ದ ಮಧುರಹಸ್ಯವ ತಾಳ್ದ
ಪಾಲ್ದುಟಿಯು ಪೆಣ್ಣೆದೆಯು ಕೂರದಾ ಮೊನೆಗಳಲಿ

ರಕ್ತ ಚೆಲ್ಲಾಡಿ ಚೀರಾಡಿ ಕೆಡೆದಿರಬೇಕು ;
ಕೇಳ್ದು ಅದ ನಿನ್ನ ತಾಯೆದೆ ರೋಧಿಸಿರಬೇಕು.
ನಿನ್ನ ದಾರುಣದ ಆ ಮೊರೆಯು ಕೋಲಾಹಲವ
ಬಣ್ಣಿಪ ಸಮರ್ಥರಿರಲಿಲ್ಲ, ನಾ ಬಣ್ಣಿಪೆನೆ

ಕಣ್ಣ ಕೆಡಿಪಮವಾಸೆ ಕ್ಷುಬಿತವಾಗುವ ಕಡಲ
ಉನ್ಮಾದವೆಂದು ? ವಿಲಯದ ಜಲದ ಮೊರೆಯೆಂದು ?
ಕಾಲದ ಅವಿಚ್ಛಿನ್ನ ವಾಹಿನಿಯು ಮಲ ಮಗುವೆ !
ಕಾಲ ತೊಳೆದಿತು ಎಲ್ಲ ಕ್ರಂದನದ ವ್ಯಾಹೃತಿಯ !

ಕಾಲಹತಿ, ಕ್ರಂದನದ ಹತಿಗಳಲಿ ಕುಗ್ಗಿರುವೆ !
ಆಲಿಸುವರಿರರು ನಿನ್ನರೆಮೊರೆಯುಲಡಗಿರುವ
ಗೋಳ ! ಅಂದರೆಯುಂಡು ವಿದ್ರೋಹವಾದುದನು
ಕೇಳಿ ವೀರಾವೇಶ ಮಿಗೆ ವ್ಯಾಘ್ರದೊಲೆ ಹಾರಿ

ಹೋರಿ, ಅಸಹಾಯನೊಬ್ಬನೆ–ಚೀರಿ, ಉರುಳಿದಾ
ವೀರ ದಾರುಣವ ತಾಯ್ ಪೃಥೆಯೆ ವರ್ಣಿಸಬೇಕು !
ಮೀರಿದಳಲುನ್ಮಾದವಾಗಿ, ಬಾಯ್ಬಾಯ್ ಬಿಡುತ
ಘೋರ ಹಂಬಲಿಸಿದಾ ರಾಣಿವಾಸದ ಅಳಲ

ದಾರುಣದ ಸಂಭ್ರಮವೊ ಚೀರಿ ಕೆಡೆದುದನಾರು
  ನೀರಾಗದಳಲ ಬೇಗೆಗೆ ಹೇಳಿಕೊಳಬಹುದು ?
ಮಾರಿ ಮತ್ಸರ ಕೋಟೆ ಕೊತ್ತಲದ ಬಂಧಗಳ
  ಮೀರಿ – ಒಡೆದೆಲ್ಲವನು – ಬಲಿಗೊಂಡುದಿರಬಹುದು.

ಹೈದರನ, ಮೀರಸಾಧಕರ ನಿಧನಗಳಾಯ್ತು !
  " ಜೈ ದೊರೆಯೆ !" ಎಂದು ಒಡೆಯರ ಏರಿಸಿದುದು ಆಯ್ತು,
ಗಾದಿಯಲಿ ! ಚರಿತೆಗಾವುದು ಸ್ಥಿರವೊ ನಾನರಿಯೆ !
  ಆ ದಿನದ ರಾಜಧಾನಿಯೊ ಇಂದು ಬಡಗ್ರಾಮ !

ಇಂದಿನೀ ರಾಜಧಾನಿಯು ಅಂದು ಎಂತಿತ್ತೊ ?
  ಹಿಂದೆ ವೈಭವವೆಂದು ಮೆರೆದುದಿಂದಿನ ಸ್ಥಿತಿಗೆ –
ಚಂದದೀ ನಗರ ಸಂಸ್ಕೃತಿಗೆ ಗ್ರಾಮ್ಯವೆ ಗ್ರಾಮ್ಯ !
  ಎಂದರೂ ಹೇಳಿಕೊಳುವರು ಅಂದೆ ಸುಖವೆಂದು !

ಆದರದೊ ಎಲ್ಲ ಹಿಂದಿನ ಮಾತು  ಸುಖ – ಭೋಗ
  ಆ ದಿನದ ಗಟ್ಟಿಗಟ್ಟಿಯ ಚಿನ್ನ ರನ್ನಗಳ
ಮಾದರಿಯ ಆವೇಗ—ಉದ್ವೇಗಗಳ ಕಾಲ !
  ಆದ ಹೋದಾ ಮಾತು ! ಇಂದೊ ಅಗ್ಗವೆ ಬದುಕು –

ಬಾಳುಗಳ ಉನ್ನತಿಕೆಗೇರಿಸುವ ಕಾಲ ! ಇದು
  ಧೂಳು – ಚಕ್ಕಳಗಳಲಿ ಬೆಲೆಯನಳೆಯುವ ಕಾಲ !
ಮೂಳೆ ಮೂಳೆಯೆಯಿರಲಿ, ನಾಗರಿಕರೆನ್ನುವರು !
  ಕೂಳೆಯಾದಂತಿರಲಿ ಎದೆ, ಚೆಲುವು ಎನ್ನುವರು !

ನಾಸ್ತಿಕರು, ತಾರ್ಕಿಕರು, ವೈಜ್ಞಾನಿಕರು, ಎನ್ನ
  ಈ ಸ್ಥಿತಿಯ ಆವೇಗ ಉದ್ವೇಗಗಳ ನಕ್ಕು
ಜಾಸ್ತಿಯೇನಿವನೊಬ್ಬ ಹುಚ್ಚನೆಂದೆನಬಹುದು.
  ಸೃಷ್ಟಿ. ಆದರು ಸತ್ಯ, ದಿವದ ಇಚ್ಛೆ ವಿಚಿತ್ರ.

ಏನಾದರಾಗಲದು. ಅದನೆಲ್ಲ ಕುರಿತು ನಾ
ಬೇನೆಯೆರೆಯಲು ಬಂದೆನಿಲ್ಲ. ಆದರು, ಎಲ್ಲಿ
ಆ ನಾರಿಗಳ ತಂಡ ತೊಟ್ಟನಿಲುವಾಭರಣ
ಮೌನಿ, ನಿನ್ನೆದೆ ನೆರೆಯೆ ಪ್ರತಿಬಿಂಬಿಸಿದುದಂದು ?

ಹುಣ್ಣಿಮೆಯ ರಾತ್ರಿಗಳು ನೀನವರ ಕಳೆದುಂಬಿ
ಸೆಣ್ದೆಸೆಯು ಹೊಳೆದ ಮಣಿ ಮುತ್ತಿನಾಭರಣಗಳ
ಕಣ್ಗೊಳಿಸಿ, ಕೊಂದುಹಾಕಿದುದನಂಗಾಸ್ತ್ರದಲಿ ?
ಕಣ್ಮಣಿಯೆ, ಒಮ್ಮೆಯೂದರು ಎನಗೆ ಅಂತೆಗ್ಗೆ !

ನಾನೊಬ್ಬನೇ ಇಹೆನು- ನಿನ್ನನಡಿಗಡಿಗೂಡಿ
ಆನಂದಕೆಂದೆ ಪೋಷಿಪ ಮಳೆಯ ಮೋಡಗಳೊ
ಬಾನೊಡೆದ ಕದನವಾಗುತಲಿ ಅಂತೆಯೆ ಗುಡುಗಿ,
ಬಾನ್ಮಿಂಚಿ, ಸಿಡಿಲಿ, ಮಳೆಗಳ ಸುರಿಸಿ ಕೊಚ್ಚಿಹುವು

ರಕ್ತ ಸೈಕತಗಳನು ; ಹದ್ದು ನರಿಗಳು ತಿಂದು,
ದಿಕ್ತಟವೆ ಬಿರಿವಂತೆ ಕೋಲಾಹಲಗಳೆರೆದು
ಭುಕ್ತಿ ಮುಗಿದೆಲ್ಲ ಎಲ್ಲಿಯೊ ಮಾಯವಾಗಿಹುವು ;
ಮುಕ್ತಹಸ್ತದಿ ಕಾಲ ವಾಹಿನಿಯು ಕೊಚ್ಚಿಹುದು

ವಿಭವ – ಸಂಭ್ರಮ, ಬದುಕು – ಬಾಳಿನವಶೇಷಗಳ.
ವಿಭವ ಶೂನ್ಯ ವಿಲುಪ್ತಿ ವಿಸ್ತರದ ಮುಂದೆ ಕುಳಿ-
ತಭಿನವವಿಲಾಸದಲಿ ಪ್ರಾಚೀನ ಭಾವುಕನೊ
ನಭವ ನೋಡುತಲಿಹೆನು ಒಬ್ಬನೇ ಒಬ್ಬನೇ.

ಮೇಲೊ ಬಿಳಿ ರಾಶಿ ರಾಶಿಯೆ ಮೋಡ, ಮುಂದುಗಡೆ
ಕಾಳಗದಿ ಕೊಂದ ಮಡಿದಗ್ಗಳರ ಹೆಸರುಗಳ
ಕೀಳು ಹೆಮ್ಮೆಯಲಿ ಕೆತ್ತಿಸಿದ ಶಾಸನಕಂಬ,
ಹಾಳು ಕೋಟೆಯ ವಿಡಂಬನ ಬೆರಗದೆತ್ತಲೂ.

ಅಲ್ಲೊಂದು ಇಲ್ಲೊಂದು — ನೀರಹಕ್ಕಿಗಳೊ ಈ
ಚೆಲ್ಲಾಡಿಹೋದ ವಾಹಿನಿಯಲ್ಲಿ ನೀರಾಟ-
ದುಲ್ಲಸದಿ ಮೆರೆಯುತಿವೆ. ನೊರಜುಗಲ್ಗಳ ಅಂಚೊ,
ಅಲ್ಲಿ ತೀರದ ಕಡೆಗೆ ಮರಳ ಬದಿಯಲಿ ಬೆಳೆದ

ಹುಲ್ಲುಜೊಂಡಿನ ಮರೆಯೊ ಇಳಿದು ಬಕಗಳು ತಮ್ಮ
ಉಲ್ಲಸದ ಪಕ್ಷಗಳ ಮುದುರಿಕೊಂಡಲ್ಲಿ ಕುಳಿ-
ತಲ್ಲಿ ಮೀನ್ ಮಿಡಿಯೆ ಕಾಯುವುವೇನ ನರಿಯದೆೋಲೆ!
ಅಲ್ಲೊ ಬಾನೆಡೆಯೆ ತೇಲಿವೆ ಹದ್ದು — ಒಂದೆರಡು !

ಮಿರ್ಜ ಸ್ವಪ್ನವ ನೆನಸಿಕೊಡುವ ಸೇತುವೆಗಳೋ
ನಿರ್ಜನವೆ — ಅಲ್ಲೊಂದು ಇಲ್ಲೊಂದು. ಅತ್ತ ಧನ
ಆರ್ಜಿಸುವ ನೆಪದಿಂದಲಿರಬಹುದು, ಎಳೆಯುತಿವೆ
ದುರ್ಜನರ ಕೋಲ ಏಟಿಗೆ ಗಾಡಿ ಯೆತ್ತುಗಳು.

ತೀರದೊತ್ತಿನಲತ್ತ ಕೆಲಹಲವು ಮರಗಳಿವೆ —
ಆ ರಾಜವೈಭವದ ಕಾಲಗಳದಿರಬಹುದು.
ಆರು ಬಲ್ಲರು ಗಾಳಿಗವೂ ಮೆಲನೆ ಸುಯ್ವಾಗ
ಆರ ಬೀರದ — ಪ್ರಣಯಲೋಭದಿತಿಹಾಸಗಳ

ಸಾರುವುವೊ? ಮತ್ತಿತ್ತ ಜಳ ಜಳನೆ ಹರಿಯುತಿದೆ
ನೀರೊ ನೊರೆಗುಳ್ಳೆಗಳೊಳೆರೆದೆರೆದು ಕಲ್ಲೆಡೆಯೆ,
ಮೀರಿ ಮೊರೆವುದು ನೊರಜುಗಲ್ಗಳನು ತೊಳೆವಲ್ಲಿ
ಜಾರುವುವು ದಿಟ್ಟಿ — ಭಾವಗಳು ವಾಹಿನಿಯೊಡನೆ !

ಅನುಭವಿಪೆ ತೇಲಿಹೋದಂತೆನ್ನ ಜೀವವೇ
ಘನವಾಹ ಪ್ರಸರದಲಿ! ಸಿಕ್ಕಿ ಎದೆ ಹಾಯುತಿದೆ
ಆ ನೊರಜುಗಲ್ಗಳನು! ಹರಿಯುತಿದೆ ಹರಿಯುತಿದೆ!
ಧ್ಯಾನಿಸುವೆ ಈ ಭುವನವೇ ಹರಿಯುತಿಹುದೆಂದು!

ಜೊತೆಗೊಂಡು ನಾವೂ ಬಂದೆವು. ಅಂದು ವಿಲಸನಕೆ
ಜೊತೆಯಲೀ ಕಾಲ ನೇಲಿಸಿ ನೀರಲಡಿವೆರಸಿ
ಅತಿ ವಿನೋದಕೆ ಎನಲು ಕಾಲ್ಬೆರೆದ ವಿಾನ್ಗಳನು
ಜೊತೆಯು ಸುವರ್ಣ್ಮನಗಳು ಎಂದು ತಿಳಿದುಕ್ಕಿ ಬಹ

ಹಿಗ್ಗು ಚಕ್ಕುಳಿಗಳಿಗೆ ಮನಗಳನೆ ಮಾರಿದೆವು !
ಮುಗ್ಗರಿಸುವೊಲಿ ನಟಿಸಿ ಮನದನ್ನೆ ನೋಡಿಕೊಳೆ
ಒಗ್ಗಿ ಪ್ರತಿಬಿಂಬವನು, ಹೆದರಿದೊಲಿ ಹಿಡಿದವಳ
ಸಗ್ಗದಾ ಭುಜಗಳನು, ಕಂಡೆನಂತೆಯೆ ಅದನು.

ಸ್ವರ್ಗದವರಂತೆ ನಾವ್ ನಿಶ್ಚಿಂತೆಯಿಂದಲೆದು
ದುರ್ಗ ತೀರಗಳೆಲ್ಲ, ತರುವಿಟಪಿಗಳನೆಲ್ಲ—
ನಿರ್ಗಮಿಸಿದಂದಿನಾ ಪ್ರಣಯ ವೃತ್ತಾಂತಗಳ
ಸ್ವರ್ಗವನೆ ಮರುಳು ಹಿಡಿಸುವ ಪರಿಯೆ ಆಡಿದೆವು.

ಸ್ನಾನಗೈದಿಹೆವಿಲ್ಲಿ ಜೊತೆ ನಿಂತು ಸೋಂಕಿ. ನಾ
ಜಾನು—ಜಂಘೆಗಳ ಸೋಂಕಿದ ಪರಿಯೆ ಅನುಭವಿಪೆ
ಸ್ನಾನಕಿಳಿದಾಗ ! ಕಾಣುವೆನಿನ್ನು ಪ್ರತಿಬಿಂಬ !
ನೀನವಳ ಕಲೆಯ ಕಾಪಾಡಿಕೊಂಡಿರಬಹುದು !

ಈ ಸಣ್ಣ ತೆರೆಗಳೀ ಸುಳಿಗಳೀ ಛಾಯೆಗಳು
ಏಸೊಂದು ನೆನೆಸಿಕೊಡುತಿಹುವವಳ ಚೇತನವ !
ಆಸೆ ಎನಗಿಂದೊ ಜೀವನೆ ಎಲ್ಲೊ ಇಲ್ಲೆ ಚೆಲ್
ಆಸೆ ಮಿಗೆ ದೀರ್ಘಾವಗಾಹದಲಿ ಇಹಳೆಂದು !

ಸೆಳೆತಕ್ಕೆ ಜಾಲಿಸೆನ್ನಯ ಕೈಗಳೀ ನೊರಜ
ಬಳಿ ಸಾರಿವಿಡಿಯೆ ಉಂಗುರದವಳ ಅರುವೆರಳು,
ಒಳಗೊ ಅಡಿಯಿಡೆ ಕರಗುವಾ ಮರಳೊಳಿಳಿಯುತಿರೆ
ಸುಳಿದವಳ ಚಪಲವೂ ಸುಖ ಸೋಕ ಬಹುದೇನೊ !

ಮೈಕೊಳೆಯು ಕಳೆವಾಗ ಮೀನ್ಪಳಗ, ಎನ್ನವಳ
ಕೈ ಕೊನೆಯು, ಹಾಯ್ಗುರುಳ ಗುಂಗುರೂ ಇಟ್ಟೆನಗೆ
ಮೈ ಕೆದಕಿ ಕುಲುಕಿಸುವ ನಗೆಯು ಚಕ್ಕುಳುಗುಳಿಯು,
ಆಕಸ್ಮಿಕವೆ ಅವಳ ತುಟಿ ಹಲ್ಲು ಪಡಬಹುದು !

ಮತ್ತೆ ಆವೊಂದು ದಿನವೋ ಉಸಿರ್ವಿಡುವಿಡುತ
ಮುತ್ತಿಸೆವ ಚಂದ್ರಮನ ಪ್ರತಿಬಿಂಬ ನೀಲದೀ
ಒತ್ತೊತ್ತಿ ನರ್ತಿಸುವ ತೆರೆಗಳಲಿ ನರ್ತಿಸುತ
ಚಿತ್ತವನೆ ಅಪಹರಿಸುವಂದು, ಬಾನೆತ್ತಲೂ-

ಎತ್ತಲೂ ಮೌನವಿರುವಂದು, ನಾ ತಪಿಪಂದು
ಅತ್ತು ಕಾಡುತ ಕುಳಿತ ಎನ್ನನಾಕಸ್ಮಿಕವೆ
ಚಿತ್ತ ವಿಸ್ಮಯವಿಡುತ ನೀರನೊತ್ತರಿಸುತ್ತ
ತತ್ತರಿಸಿ ಸೆಳೆತಕೀ ಕಲ್‌ವಿಡಿದೆ ಬಹಳೆಂದು,

ಅದರಲೀ ಎನಗಾಸೆಯಿನಿಸು. ಅರಸರಸಿಯರ
ವಿಭವವಿರದಿರಬಹುದು , ರಾಜ್ಯೋದಯಾಸ್ತಗಳ
ಅದುಭುತವು ಇಲ್ಲದಿರಬಹುದು ಅಲ್ಲದರಲ್ಲಿ ,
ನಭದ ಶುಭ – ಅಶುಭ ಸೂಚಕಗಳಿರದಿರಬಹುದು ,

ಆದರೇನ್ ? ಅವರ ಅಭ್ಯುದಯುದಲು ನಾಶದಲು
ಆದ ಬೆರಗವರೆದೆಯ ಆಗು ಹೋಗಿನದಲ್ಲ,
ಆಧಾರ – ಭೂತದಾ ರಾಜ್ಯ ವಿಜೃಂಭದುದು
ಆದಿಯಲಿ ಅನಿಸೊಂದು ವೈಭವದ ವಿಸ್ತರದಿ

ಹುಟ್ಟುವಾ ಅನಿತೊಂದು ಪುಟ್ಟು ಬಾಳಿನ ಬೆರಗು !
ಅಂತ್ಯದಲು ಅನಿಸೊಂದು ವೈಭವವು ಒಳವಾದ
ಅಟ್ಟಹಾಸವೂ ಒಮ್ಮೆಲೇ ಕವಿಯುವದ್ಭುತ !
ಸ್ವಾಂತವೊಂದಲ್ಲ, ಅಳುವುವು ಭಾಗ್ಯ ಕಳಶಗಳು !

ಆದರಿದೊ ಅಂತಲ್ಲ, ಬರಿಯೆದೆಯ ಹಿಗ್ಗು – ಅಳು;
ಆದರದ ಅಕ್ಕರೆಯ ಸುಖ – ದುಃಖ, ನಗೆ – ಗೋಳು;
ಮೋದ ತುಂಬಿದೆಯೊಡೆದ ಕಿರಿ ಬಾಳ ಹಿರಿದಾಳು ;
ಮೇದಿನಿಗೆ ಕಾಣಿಸದೆ ಹಲುಬಿಕೊಳ್ಳುವ ಬಾಳು.

ಸ್ಮರಿಸುವೆಯ ಮತ್ತೆ ನೀನೆನ್ನಂತೆ ಅದನೆಲ್ಲ ?
ಸ್ಮರಿಸಿಕೊಡೆ ನೀನಂತೆ ಗೈವೆಯೆಂದೇ ನೆನೆವೆ.
ಸ್ಮರಣೆಯಿಂದಲ್ಲದುದಯಿಪುದಾವ ಸಮುಸ್ಮರಣೆ !
ಬರಿ ಮೌನ ತಾಳಿದರು ಭಾವುಕನ ಪ್ರಶ್ನೆಯಿದ

ಕರಿಯ ನಿನ್ನನು ಕಂಡು ಆದ ಚಿತ್ತವಿಕಾರ
ಒರೆವುದೌ ನಿನ್ನಂತರಂಗವೆಲ್ಲವ ಕರುಣೆ.
ಮರೆಸಿ ಕವಿದಿರಬಹುದು ಮೋಡ ಶಶಿಯನು, ಆದ-
ರರಿವು ನೈದಿಲೆಗಿಂದು ಉದಯಿಸಿದ ಸೂಚನೆಯೊ.

ಜೀವನಕೆ ಜೀವನವೆ ಹಿರಿಯ ನಂಟೆಂದರಿತು
ಭಾವುಕನೊ ಬಂದಿಹೆನು ಸುಖ–ದುಃಖ ಹೇಳಿಕೊಳೆ.
ಆವೇಗ ತುಂಬಿಬರೆ ತುಳುಕಿದುದೊ ಸತ್ಪಾತ್ರ–
ಭಾವ ಸೇರುವುದೊಳಿತು. ಇಲ್ಲ, ಎರೆವುದೆ ಅಣಕ.

ಕಾನನಾಂತರಗಳಲಿ ಋಷಿಗಳೊಲಿ ಮೊರೆದೆರೆವ,
ಆ ನಗಾಂತಗಳಿಂದ ಕಾಳಿ ಮುನಿದೊಲುರುಳ್ವ,
ಕಾನನದ ಮೃಗ ಪಕ್ಷಿ, ನೂರು ನಾಡಿನ ಜನರ
ಪ್ರಾಣಿಗಳ ಕ್ಷುತ್ಪಿಪಾಸೆಯ ಕಾವ ಓ ರಾಣಿ !

ಸ್ವಾಂತ ಶಕ್ತಿಯೊಳೋವ, ಸ್ವಾಂತ ಭಿತ್ತಿಯೊಳೆಸೆವ,
ಸ್ವಾಂತ ಶೃಂಗರದಿ ಲೋಕವನೆ ಶೃಂಗರಗೈವ–
ನಂತ ಕಾರುಣಿಕೆ ! ಓ ಉಪನದಿಗಳೆಲ್ಲ ಶ್ರೀ–
ಮಂತ ತಾಯ್ ! ಕ್ಷಣಿಕ ವಿಭವಗಳೆಡೆಯೆ ಹರಿವಮರೆ !

ನಿನ್ನನೇ ಸರಿಯು ಸಹವಾಸಿಯೆಂದರಿತು ನಾ
ಎನ್ನ ಎಳವೆಯೊಳೆನಿಸೊ ಅಡಿಗಡಿಗೆ ನೆನಸಿದೊಲಿ
ಮುನ್ನ ಓಡೋಡಿಬಂದಿಹೆ ! ಅಂಥ ದಿನವೆಲ್ಲ
ಎನ್ನ ಮನಸಿಗೆ ನಿನ್ನ ಮೃದು ಮೊರೆಯೊಳೆರೆದೆ ಹಿತ.

ಆದರರಿಯಲೊ ಸೈಪು – ಕಾರಣವನೆಂದೆಳವೆ.
ಈ ದಿನವೊ ಚಿಂತಿಸಲು ಬಲ್ಲೆ ನಾ. ಇಂದರಿಯೆ
ಸಾದರದಿ ನಿನ್ನೊಳವನಾ, ಎನ್ನದನೊ ನೀನು
ಮೋದದೆವ್ಮಯ ಕೆಳೆಯೊ ಹಿತ – ನಿತ್ಯವಾಗುವುದು

ಇನ್ನು ಅಡಿಗಡಿಗೆ ನಾ ಬಂದು ನಿನ್ನಲಿ ಎರೆವೆ
ಎನ್ನ ಉಬ್ಬೆಗದ ಹೆಚ್ಚಳವೆಲ್ಲವನು ಮುನ್ನ,
ನಿನ್ನ ಅಂತಃಕರಣದಲಿ ಎನ್ನಜೀವವನೆ
ಮುನ್ನ ನಾ ಅದ್ದಿ ಮಮತೆಯೆ ಮರೆತು ಸುಖಗೊಳ್ಳೆ

ಓವೊ ಬೆಡಗಿಯುರ ನಾಡಲಿ ಉದಿಸಿದತಿ ಬೆಡಗಿ !
ಭಾವಿಸಲು ನಿನ್ನೊಳೆನ್ನಿನಿಯೆ ನೆನಪನು ತರುವ
ಭಾವಸೌಂದರ್ಯಗಳು ಎನಿಸೆನಿಸೊ ಇಹುವು, ನೀ
ನಾವಳೋ ಅವಳ ದೇವತೆ – ಸಖಿಯೆ ಎಂದರಿವೆ !

ಅದಕೆ ನಾನೈತಂದೆ ನಿನ್ನೆಡೆಗೆ ಸೈಪುಗೊಳೆ,
ಅದಕೆ ನಾನೆರೆದೆ ನಿನ್ನಲಿ ಇಂತು ಎನ್ನಳಲ,
ಸದರದಲಿ ಎನ್ನ ಸಂತೈಸಿ ಕಳುಹುವೆಯೆಂದೆ
ಅದಕೆ – ನಾನೈತಂದು ಕಾಯ್ವುದಿಲ್ಲಡಿಗಡಿಗೆ

ಅಂತು ನಾನಾಸೆಗೈವುದದೆಲ್ಲ ನೀರಲುಳಿ
ದಂತು ಬರಿ ವ್ಯರ್ಥ ತಾನಾಗದಿರೆ ಕಾಣುವೆನು
ಭ್ರಾಂತಿಯುತ್ಸುಕದೆಲ್ಲ ಪೂರ್ವ ಸುಖಗಳ ಮತ್ತೆ
ಇಂತು ಏಕಾಂತದೀ ನೊರಜುಗಲ್ಲಿನ ಎಡೆಯೆ.

ಅಂಥ ದಿನ ಎಂದಾದರೆನ್ನ ಹರಸುವುದಾಗೆ
  ಚಿಂತೆಯೇತಕೆ ರಾಜ್ಯಗಳು ಉದಿಸಿ ಅಳಿದುದಕೆ?
ಚಿಂತೆಯೇತಕೆ ಕಳೆದ ವಿಭವ ಶೃಂಗರಗಳಿಗೆ?
  ಅಂತದೆಲ್ಲವನಿಲ್ಲಿ ಉದಯುಗೈಸುವೆ ಮತ್ತೆ.

ಎನ್ನೊಂದು ಹಾಡಿನಲಿ, ನಿನ್ನೊಂದು ಮೊರೆಯಲೀ,
  ಚಿನ್ನ ಚಂದ್ರಮನೊಂದು ಹೊಂಬೆಳಕ ಪ್ರಸರದಲಿ,
ನಿನ್ನ ತೀರದೊಳಿರುವ ತರು ಲತಾ ವೇಷ್ಟಿಯಲಿ,
  ಭಿನ್ನವಾದೀ ಹಾಳು ಕೋಟೆ ಕೊತ್ತಲದಲೀ,

ಈ ಹಾಳಿನೆಡೆಯೆ ಯಕ್ಷರ ರಾಜ್ಯ ನಿರ್ಮಿಸುವೆ;
  ಈ ಹಾಳಿನಲಿ ಎಲ್ಲ ವಿಭವ ಶೃಂಗರಗಳನು
ಮೋಹಗೈಸುವೆ; ಟೀಪು ಹೈದರರು ಹಾಗಿರಲಿ,
  ಈ ಹಳೆಯ ನೊರಜುಗಲ್ಲಲಿ ಅಳಕೆ ನಿರ್ಮಿಸುವೆ.

# ಬೇಸರ

ಬೇಜಾರೊ ಬೇಜಾರು ಬಾಳೊ ಬಲು ಬೇಜಾರು
ಈ ಜೀವವಿಂತಲಸಿ ಏಕಾಕಿ ಅಲೆಯುತಿರೆ !
ಓ ಜಾರುತಿದೆ ಶಕ್ತಿ !
ಈಜುತಿದೆ ಕೀಲು ಕೀಲ್ !
ಈ ಜಗವೊ ಏರೇರು ಮರಳುದಿಣ್ಣೆಯೊಲಿಹುದು !

ನಾಡಿಲ್ಲ, ಬೀಡಿಲ್ಲ, ಮಂದಹಾಸವ ಬೀರಿ
ಕೂಡೆ ಸೈಪಿಡುತಿದ್ದ ಇಂದುಮುಖಿ ಒಡನಿಲ್ಲ.
ಗೂಢವಾಗಿದೆ ನೋವೊ,
ತೋಡಿಕೊಂಡಿದೆ ಕಾವೊ ;
ನಾಡೆ ಆಸರಕೆನ್ನ ಎದೆ ಸೋಲುತಿಹುದಲ್ಲ !

ಕಣ್ಣೊ ಕಂಗೆಟ್ಟಿಹುದು, ಮನಸೊ ಮಂದವೊ ಮಂದ ;
ಮಣ್ಣುಮುಕ್ಕುತಲಿಹುವು ಉತ್ಕಟ ವಿಕಾರಗಳು,
ಹುಣ್ಣು ಹುಣ್ಣಾಗಿಹುದು
ಹಣ್ಣು ಜೀವವೊ ನೊಂದು,
ತಿಣ್ಣವಾಗಿಹುದೆನ್ನ ಸೇದೆಯೋ ಖೇದವೋ !

ಸೇದಿಹೋಗುತಲಿಹುವು ಕೈಕಾಲು ನಿಂತಲ್ಲೆ ;
ಮೂದಕವೊ ಬಾಧೆಯೋ ಮುಜುಗರವೊ ಅತಿಯಾಯ್ತು.
ಈ ಧರೆಯೆ ಸುಖವಿಲ್ಲ,
ವೋದವಿಂಗಿಹುದೆಲ್ಲ.
ಓ ದಾರಿಗಾಣದೇ, ಅಸು ತಾರಿಹೋಹುದೇ !

ಹಕ್ಕಿ ಪಕ್ಷಿಗಳೆಲ್ಲ ಇಂಚರವು ಕಟುವೆನಗೆ ;
ಮಿಕ್ಕ ನೋಟಗಳೆಲ್ಲ ನಿಷ್ಪೀಡನವು ಎನಗೆ.
 ಸೊಕ್ಕಿಹುದು ಲವಲವಿಕೆ ;
 ತಿಕ್ಕಾಟ ಮನಸಿನಲಿ.
ಅಕ್ಕಟಾ ಸಾಕು ಸಾಕೀ ಭಂಗವಿದು ಎನಗೆ !

ಆಶೆಯೊ ನಿರಾಶೆಯೋ ಒಂದು ಯಿಲ್ಲೆನಗಿಂದು.
ಘಾಸಿಯೋ ಹೇಸಿಗೆಯೊ ಹೆಸರಿಸುವರಾರಿದನು ?
 ಲೇಶವೂ ಸುಖವಿಲ್ಲ !
 ಲೇಶವೂ ಸುಖವಿಲ್ಲ !
ರಾಶಿ ಹೊನ್ನಿದ್ದರೇನೇಕಾಕಿಯೊಡಬಾಳು.

# ಕನಸಲಾದರು ಬಾ

ಕನಸಲಾದರು ಬಾರೆ ನೀನ್ ಎನ್ನ ಪ್ರೇಯಸಿ,
ಅನಿಶ ಕಳೆಗುಂದುತಿಹೆ ನೀನಿಲ್ಲದೆನ್ನರಸಿ.
ಎನಿಸು ಕಾರ್ಪಣ್ಯವಿಂದರಿಯು ಸ್ವರ್ಗನಿವಾಸಿ ?
ನೆನೆ ನೆನೆದು ತಲೆಗಿಂಬೊ ತೇವ, ಮನ ವಾರಾಶಿ

ಎನಿಸೊ ಸಿಂಗರದಿಂದ ದಿಟಕೆ ಸಂದೆಗ ತರದೆ
ನಿನದಾದ ಆ ರೋಜ ಸೀರೆಯಲಿ ನೆರೆದು ಬಾ.
ಇನಿವೆರಳ ಎಡೆ ಎರಡು ಅಡಿಕೆ-ಎಲೆ ಸುರುಳಿ, ಬಾಯ್
ಇನಿದಾಗಿ ಸವಿಯುತಿರಬೇಕು ಒಂದೆರಡ, ತುಟಿ
ನನೆವಿರಿವ ರಕ್ತ ತಾವರೆಯೊಲೇ ನಸು ನಗೆಗೆ
ಘನವಾಗಿ ಕೆದರುತಿರಬೇಕು, ನೀ ಬರಬೇಕು.

ಮೊದಲು ನೀನಾಚೆ ಎತ್ತಲೊ ಕೂಗಿ ಭ್ರಮೆಗೊಳಿಸಿ
ಮುದದ ಬಳೆ ಸದ್ದ ಜಳ ಜಳಗೈದು, ಮೆಲನಂತೆ
ಮುದದ ಗಜಲಕ್ಷ್ಮಿಯೊಲೆ ತುಳುಕಿ ಬಳುಕೈತಂದು
ಕದದ ಮರೆಯಲಿ ನಾಣ ಬಿಂಕದಲಿ ತಲೆವಾಗಿ,
ಕೆದಕಿ ಕಾಲ್ಬೆರಳಲಡಿನೆಲವ, ಕೈವೆರಳೆಣಿಸಿ,
ಮುದಕಂಪವಿನಿಸಾಂತು–" ಜೀವನಾ "–ಎನಬೇಕು ;
ಅದು ಬರಿಯ ಅವ್ಯಕ್ತ ಮಧುರದಲಿ , ಒಡೆಯು ಬಾ-
ರದು ಅನಿತು ಸುಖಸ್ವಪ್ನ ಪದಪಿನಾತುರಕೊರಲಿ
ಅಂತೆ ಸುಪ್ತಿಯ ಸುಖದ ನೋಡಿಯಲಿ ಅನುಭವಿಪ
ಕಂತುವುತ್ಕಟ ಹೃದಯ ವಿಪ್ಲವವ ಭೇದಿಸದೆ
ಕಾಂತೆ ನೀನಂತೆ ಪಿನ್-ಮುನ್ ತುಳಿದು ಐತಂದು
ಮೊದಲ ದಿನ ನಾವ್ ಮಲಗಿದಲ್ಲೆ ಆ ವಾಸಿನಲಿ
ಮಿದುವಾಗಿ ಸೋಂಕಿ ಸೋಂಕದ ಪರಿಯ ಬಳಿ ಮಲಗಿ

ಸೊದೆವರಿವ ಪರಿಯಲೀ ಎನ್ನ ಸೊಕ್ಕಿಸಬೇಕು.
ವಾಸ್ತವವೆ ಎನಿಸಿ ಒಂದೆರಡು ಸವಿಮಾತಾಡಿ
ಜಾಸ್ತಿಯಿಲ್ಲದೆ ಇನಿಸೆ ಮುನಿದು ಕೊಂಜುತ ಕಾಡಿ
ವಸ್ತ್ರವೇತಕೊ ಕೊಳವೆಮಣಿ ರಸದಗುಂಡು ಕರ
ವಸ್ತ್ರ ಹಾಕುವ ನೂಲು-ಆವುದಕೊ ಬಾಲೆಯೊಲಿ
ಕುಣಿಯುವುದು ತೊನೆಯುವುದು ಒಳಿತಿನಿಸು ಭ್ರಾಮಕಕೆ.
ಕಣಿ ಹೇಳಿ ದೂರದೇಶಕೆ ಹೋಗದಿರೆನೆಂದು
ಹೆದರಿಸುವೆ ಸಾನಾಗ. ಆಗ ಎನ್ನೆದೆಗೌಕಿ
ಮುದು ಮೊಗವ ಒಂದೆರಡು ಕಣ್ಣ ಹನಿಯಿಡಬೇಕು
ದೀನಾವತಾರಳೊಲಿ- ಎದೆ ನೆಸೆಯುಬಾರದು.
ತಾನಾಗಿ ತಾ ಮಾತು ಆವ ಗೃಹಕೃತ್ಯಕೋ,
ಹೀನಾಯವಾವುದಕೊ ತಿರುಗುವುದು ಬಲು ಜೋಕು.
ಕನಸಾದರೇನಂತೆ-ಬಾಳಿ ಬರಿ ಕನಸಲ್ಲ?
ಇನಿತಾಗಿ ತೊನೆದಂತೆ ಸುಳ್ಳು ಕಥೆಗಳ ಹೇಳು
ನಿನಗೆಂದೊ ಅಡುಗೆ ಮಾಡುವ ಸಮಯ ಕೈ ಬೆಂದು
ಹೋದುದನೊ, ಮದುವೆಯಲಿ ಕಿತ್ತು ತಲೆಯಲಿ ಬಿದ್ದ
ಮೋದದುಯ್ಯಾಲ ಒಂದು ಸರಪಳಿಯ ಗಾಯವನೊ
ಕುರಿತು ಇಂದಿಗು ಸುಗಿಲನಿಡುವ್ರೊಲೀ ಎಲೆ ರಸಿಕೆ!
ಅರುಮೆ ಮತ್ಸರಿಸದಿರೆ ಒಪ್ಪಿ ತಲೆದೂಗುವೆನು.
ಪ್ರೇಮದಲಿ ನುಸುಳನಾಡುವುದು, ಅದ ಕೇಳುವುದು
ಓ ಮನೋಹರ! ಮತ್ತೆ ಅದನಿದನು ಕಣಿಯೊತ್ತು.
ನಿನ್ನ ಒಕ್ಕಣೆ ಮಾತಿನಲೆ ಎಂದು ಪ್ರಿಯವೆನಗೆ.
ಮುನ್ನ ಒಂದಿನಿಸು ಮೌನದಲಿದ್ದು—"ಎಡೆಯೆ ಇಹೆ.
ಎಂದು ನಿನ್ನೆದೆಯಲಿಹೆ. ಎಂದು ಅಗಲಿರೆ."— ಎಂದು
ಚೆಂದುಟಿಯ ಸಚ್ಚನೆಸ್ನಯ ತುಟಿಯಲಿಟ್ಟೊತ್ತಿ-
ಆರದೆಂಜಲ ಅರುಮೆಸೊತ್ತಾಗಿ ತನಿಯಿಕ್ಕಿ-
ಸಾರದೊಲವೇನೊಂದು ಕುರುಹಸಾದರು ಇಡಲು

ತೀರ ಸುಖ — ಅದೊ ಎಲ್ಲ ಗುರುತಿಗಿಂತಲು ದಿವ್ಯ-
ಪೂರ ನಿಷ್ಠುರ ಮಾಯೆ ನಿನ್ನ ಕೊಂಡೊಯ್ಯುವೆನೆ
“ ಮತ್ತೆ ಮತ್ತೆಂತಾರ ಅಂಥ ಸುಖ ಸುಖಕಾಗಿ
ಮೆತ್ತನೈತಹೆ ರಾತ್ರಿ ರಾತ್ರಿ” ಎಂದೆನಗೆ ಹಿತ
ಹೇಳಿ ಕಣ್ಣೀರಿಡುತ ಗುಯ್ಯುತ — ವಿರಾಗಿಣಿಯೆ-
ತಾಳು ತಾಳ್-ಮತ್ತೆ ಐದಂತೆ ಬರುತಿರು ರಾತ್ರಿ.

# ಅದಕೆ

೧

ಬಿರಿಮುಡಿಯ ತುಂಬ ಮಲ್ಲಿಗೆ ತುಂಬಿಕೊಳುತಿದ್ದೆ ;
ಮರುಳು ನೀ ನಾಮುಡಿಯೊ ಮಲ್ಲಿಗೆಯ ಹೆಡೆಯೋ ! ?
ಸಿರಿಯೆ, ನಾನದಕೆ ಆ ಹೂ ಕಂಡ ಕಡೆಯೆಲ್ಲ
ತರಳನೊಲಿ ಪೆಚ್ಚಾಗಿ ನಿಲ್ವುದಿಂದೂ.

೨

ನೀ ಕೂಗಿದಾಗೆಲ್ಲ ಎನಗೊ ಕೋಗಿಲೆ ಭ್ರಾಂತಿ ;
ಆ ಕೂಗೊ ! ನೀನೇನು ಕೋಗಿಲೆಯ ಮರಿಯೊ ! ?
ಹೇ ಕಾಂತೆ, ಅದಕೆ ನಾ ವನ ಕಂಡ ಕಡೆಯೆಲ್ಲ
ನಾಕದೆಡೆ ತಲೆಯೆತ್ತಿ ಕಂಗೆಡುವುದು.

೩

ನೀ ತೊಟ್ಟ ಮೂಗುತಿಯೊ ಇನ್ನು ಮನಸಿಗೆ ಮೋಹ ;
ಓ ! ತೊಡವು ತೊಡವಿನಲಿ ಶೋಭಿಸುತ್ತಿತ್ತು.
ಓತುಕೊಂಡೆನು ನಿನ್ನ ಒಂದು ಮೂಗಿನ ಕಳೆಗೆ !
ಕಾತರವೆ ಇಂದೊ ಪಡು – ತಾರೆಯೊಳಗೆ.

೪

ಎಂತು ಚಿತ್ತಾಪಹಾರಕ ನಿನ್ನ ವದನೇಂದು !
ಭ್ರಾಂತಿ ಎನಗಂದು ಪ್ರತಿ ಹುಣ್ಣಿಮೆಯೆ ಎಂದು !
ಅಂತೆ ಇಂದಿಗು ಶುಕ್ಲಪಕ್ಷದಾದಿಯಲೆಲ್ಲ
ಕಂತು ಕೋಟಲೆಯೆನ್ನ ಕಾಡುತಿಹುದು.

೫

ಇನ್ನು ನಿನ್ನಂಗಾಂಗವೋ ಹಾವ ಭಾವಗಳೊ !
ಚೆನ್ನೆ – ಇನ್ನೆಲ್ಲಿ ಎಲ್ಲಿ ಅದೆಲ್ಲಿ ಕಾಂಬೆ ! ?
ಖಿನ್ನ ನಾ ಅದೆವೊಂದು ಭ್ರಮೆಯಲೀ ಮರುಳಾಗಿ
ಸನ್ನುತದ ಸೊಬಗೆಲ್ಲ ನೋಡುತಿಹೆನು.

# ಹೇಳಿಬಿಡು

೧

ಬರುವೆಯೋ ಬಾರೆಯೋ ಹೇಳಿಬಿಡು ಈಗಲೇ.
ಬರುವೆಯೆಂದಿಂತೆನಿತು ದಿನ ನಿರೀಕ್ಷಿಪುದೆ ?
ತರಳಾಕ್ಷಿ ನಿನಗಾಗಿ ಮನೆಯ ಮುಂಗಡೆಯುಲೇ
ಇರುಳು ಹಗಲೆನ್ನದೆಯೆ ಕುಳಿತೆನೇ ಕಾದು.

೨

ತಂದ ಹೂ ಗಂಧ ಫಲ ತಾಂಬೂಲವೆಲ್ಲವೂ
ಕಂದಿ ಕುಂದೊಣಗುತಿವೆ ಪ್ರತಿನಿತ್ಯವೂ.
ನಿಂದು ನಾ ಶೃಂಗರಿಸಿದೆಮ್ಮ ಶಯ್ಯಾಗೃಹವೊ
ಇಂದುಮುಖಿ ನೀನಿಲ್ಲದಂದಗುಂದುತಿದೆ.

೩

ಎನ್ನ ಕಣ್ಗಳೊ ನಿದ್ದೆಗಾಣದುರಿಯುವುದಾಯ್ತು.
ಎನ್ನ ಮನವೋ ಚಿಂತಿಸದುವುದಾಯ್ತು.
ಎನ್ನ ತನುವೋ ಊಟವುಳಿದು ಶೋಷಿಪುದಾಯ್ತು,
ಇನ್ನು ಕನಿಕರ ನಿನಗೆ ಬರದೆ ಹೋಯ್ತು.

೪

ಅರೆಮುರೆಸಿನಾವಸ್ಥೆ,-ಸ್ಮೃತಿಗೊ ಮುಂಪರ ಬೇರೆ ;
ನೆರೆ ಸನಿಯಕೊತ್ತಿ ನೀ ಸೋಂಕಿದಂತೆ
ಮರುಳಾದೆ ನಾ, ಪುಳಕ—ಸ್ವೇದ ನಿಂತಿಹುವಂತೆ,
ಮರಮಾಚದೆನ್ನಿದಿರೆ ಬಾರೆ ಬಾರೆ.

೫

ಅದೆ ಸುಂದರಾಕಾರ, ಅದೆ ಮಂದಹಾಸ ಮುಖ,
ಅದುವೆ ಬಿಂಬಾಧರ, ಅದೆ ಮದಿರ ನಯನ,
ಅದೆ ಕೇಶರಾಶಿ, ಅದೆ– ಅದೆ ಮೃದುಲ ತನ್ವಂಗ,
ಅದೆ ಅದೇ ಸೋಂಕು ಸ್ವರ್ಗೀಯ– ಸುಖದ.

೬

ಇರುವೆ ನೀನೆನ್ನೊಂದು ಸುಖದ ಸಂದೆಗವೆನಗೆ.
ಕುರುಡೊ ನಾ– ಸುರೆಯೊ ನೀ– ಮರೆಸಿದೇಕೆ ?
ತರಳರಂತೊಮ್ಮೆ ಕಣ್ಮುಚ್ಚಾಲೆಯಾಡಿದೆವು,
ಸಿರಿಯೆ– ಚಪಲವೆ ನಿನಗೆ ಎಳೆಯುರುತ್ಸುಕವೂ !

೭

ಇಂದೊಮ್ಮೆಯಾದರೂ ಕಣ್ಣೆದಿರೆ ಬಂದೆನ್ನ
ಸಂದೆಗವ ಕಳೆಯೆ ನೀ ಸಾರಸಾಕ್ಷಿ.
ಎಂದೆಂದಿಗೂ ಸರಸವೆಂದೆನಲು ವಿರಸವೇ–
ಮುಂದುಗಾಣದೆ ಇಹೆನೆ ನೀರಜಾಕ್ಷಿ.

೮

ನಿನ್ನ ನಾ ಬಲು ಬಯಸಿ ಭ್ರಮೆಯು ಮರುಳಾದಂದು
ಬನ್ನಗೊಳಿಸುತ ದೂರ ಸರಿಯುತಿರುವೆ.
ಸನ್ನುತಾಂಗಿಯೆ ಇಗೋ ದೀಕ್ಷೆಯಲಿ ವನಕ್ಕೈದಿ
ನನ್ನಿಯಲಿ ಇಹದ ಆಸಕ್ತಿ ತೊರೆವೆ.

# ಮತ್ತೆ ಶ್ರುತಿ ಮಾಡಿ ಬಾರಿಸು

೩

ಮತ್ತೆ ಶ್ರುತಿಮಾಡದನು ಬಾರಿಸು
ಅಮರ ಗೀತೆಯನೊಂದನು ,
ಕುತ್ತವೇನೇ ಇರಲಿ ಭುವಿಯಲಿ,
ಭ್ರಮೆಯಲೆಲ್ಲವ ಮರೆವೆನು

೨

ಎದೆಯ ಕಿನ್ನರಿ ಚತುರ ಗಾಯಕಿ !
ಅಮರ ಮಧುರದ ಸೆಲೆಯನು
ನಿಧಿಯೊಳಗೆ ಕಾಪಾಡಿಕೊಂಡಿಹ
ಇದುವೆ ಲೋಭವ ನೋಡು ಬಾ

೧

ಎನ್ನ ಜೀವದ ತಂತಿಯನು ನೀ
ಮಧುರ ಮೀಟುಳಿದ್ದೈದಿವೆ
ಇನ್ನು ಭಾವದ ಬೆರಗು ಎನಗದು,
ವಿಧುರ ಭ್ರಮೆಯೋ ಅಳಿವುದೆ !

# ಯಾರಿವಳು ಯಕ್ಷಿ ?

೧

ಸೇದು ಬಾವಿಯ ಮುಂದೆ ಬೀಗು ಮೊಲೆಗಳ ತೂಗಿ
ಸೇದುತಿಹಳಿವಳಾರು — ಯಕ್ಷಿಯೇನು ?
ಸಾದರದಿ ಸೇದುವಳ ಕರೆಯೆ ನಾ ಮೊಗದಿರುಹಿ
ಜಾದು ಹಗ್ಗವ ಬಿಟ್ಟು ನುಸುಳೆ ತಾನು ! ?

೨

ಘನ ನಿತಂಬವ ಕುಲುಕಿಕೊಂಡು ಪಡಿಯೇರುತಿರೆ
ಘನ ಚಪಲ ಗತಿಯಲನುಸರಿಸೆ ನಾನು
ಇನಿದಾದ ತೊಡೆವಿಡಿದು ತನನ ಓಡಿದಳವಳು
ಕುಣಿವಂತೆ ಹಾವ್‌ಜಡೆಯ ಬೀಸಿ ತಾನು !

೩

ಜಘನದೇಸೆಯನೊತ್ತಿ ಮೃದು ವೆರಳುಗಳ ತುಡುಕಿ
ಸೊಗ ಮಿಗಲು ವೀಣೆ ಮಿಡಿವಿವಳು ಯಾರು ?
ಬಗೆ ಕದಡಿ ನಾ ಸನಿಯಕೈದೆ ತೇಲಿಸಿ ಕಣ್ಣ
ನಗುತ ಕೈ ನೆಲದಲೂರೇಳೆ ತಾನು ?

೪

ಮೊಗವ ಕೊಂಕಿಸಿ ನಾಚಿ ಅವಸರಿಸಿ ನಡೆ ನಡೆಯೆ
ತಗೆಬಗೆಯೊಳರೆಯಟ್ಟಿ ಚಲಿಸೆ ನಾನು
ಲಗುವಾಗಿ ಕಾಲ್ ನೆರಿಗೆಯೆತ್ತಿ ಹಿಡಿದೋಡಿದಳು
ಮೊಗದಿರುಹಿ ಪೊಮ್ಮ ಪಾಲ್ — ಬಳ್ಳಿ ತಾನು !

೫

ಹಸುರು ಹಾಸಿದ ನೆಲ, ನೀಲಿಮಾ ಆಕಾಶ,
ಮತಿ ರಾಶಿಯಂಥ ಗಿರಿಮೇಲದೇನು ?
ಹಸುರು – ನೀಲಿಯು ಕೂಡುವೆಡೆಯ ಮುಗಿಲಂತದಲಿ
ಎಸೆವ ವಿದ್ಯುಲ್ಲತೆಯೊಲಿರುವಳೇನು ?

೬

ಉನ್ಮೀಲಿತಾನನ, ಕೋಡುಗಲ್ ಮೆಟ್ಟಿದಡಿ,
ಉನ್ಮತ್ತ ಮನದ ಆವೇಗ ತೋರಿ
ಮನ್ಮಥನ ರತಿಯೆ, ಕೈ ಹೊಸಕಿ ಸಾ ಕೂಗುವೆನೆ
ವೆಣ್ ಮುನಿದು ಶೂನ್ಯದಲಿ ಮರೆತಳೇನು ?

# ತಿದ್ದುಪಡಿ

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೩೦ | ೭ | ಸುಳಿವಕರುಳ | ಸುಳಿವಕುರುಳ |
| ,, | ೧೪ | ನವಿಲಗೌಳಿ | ನವಿಲನಾಳಿ |
| ೩೪ | ೪ | ಸಟಿಯಿಲ್ಲದೆ | ಸಟೆಯಿಲ್ಲದೆ |

೩೮ನೆಯ ಪುಟದ ಕೊನೆಯ ಸಾಲನ್ನು ೩೫ನೆಯ ಪುಟದ ಕೊನೆಯ ಸಾಲಾಗಿ ಓದಿಕೊಳ್ಳಬೇಕು.

೩೬ನೆಯ ಪುಟದ ಕೊನೆಯ ಸಾಲನ್ನು ೩೯ನೆಯ ಪುಟದ ಕೊನೆಯ ಸಾಲಾಗಿ ಓದಿಕೊಳ್ಳಬೇಕು.